# ಶಾಳುಮನೆ

ಮತ್ತು

# ಪುತ್ರಯಜ್ಞ

❦

ರವೀಂದ್ರನಾಥ ಠಾಕೂರ್

❦

ಕನ್ನಡಿಸಿದವರು :

ಶ್ರೀ. ಹೊಸಮನೆ ಗುಡ್ಡಪ್ಪನವರು

❦

ಸಾಹಿತ್ಯ ಭಂಡಾರ, ಹುಬ್ಬಳ್ಳಿ

ಇಪ್ಪತ್ತೊಂದನೆಯ ಪ್ರಕಟನೆ

# ಹಾಳು ಮನೆ ಮತ್ತು ಪುತ್ರಯಜ್ಞ

ಒಂದು ಕಿರುಕಾದಂಬರಿ, ಒಂದು ಚಿಕ್ಕ ಕತೆ



ರವೀಂದ್ರನಾಥ ಠಾಕೂರ್



ಕನ್ನಡಿಸಿದವರು :

ಶ್ರೀ. ಹೊಸಮನೆ ಗುಡ್ಡಪ್ಪನವರು



ಸಾಹಿತ್ಯ ಭಂಡಾರ, ಹುಬ್ಬಳ್ಳಿ

ಪ್ರಕಾಶಕರು :
ಮ. ಗೋವಿಂದರಾಯರು
ಸಾಹಿತ್ಯ ಭಂಡಾರ,
ಹುಬ್ಬಳ್ಳಿ

ಮೊದಲನೆಯ ಮುದ್ರಣ: ೧೯೪೭
ಎರಡನೆಯ ಮುದ್ರಣ: ೧೯೫೪

ಬೆಲೆ: ೧-೦-೦

ಮುದ್ರಕರು :
ಮೊಹರೆ ಹಣಮಂತರಾಯರು
ಸಂಯುಕ್ತ ಕರ್ನಾಟಕ ಮುದ್ರಣಾಲಂ
ಹುಬ್ಬಳ್ಳಿ

# ಒಂದೇ ಮಾತು

ನಾನು ಈ ಮೊದಲು ಅನೇಕ ಉಚ್ಚಕೋಟಿಯ ಕಥೆ, ಕಾದಂಬರಿ, ನಾಟಕಗಳನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದ ಮಾಡಿ ಕನ್ನಡ ತಾಯಿಯ ಅಡಿಗಳಿಗೆ ಅರ್ಪಿಸಿದ್ದೇನೆ. ಆದರೂ ಅಂಜಂಜುತ್ತ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೆಜ್ಜೆ ಇಡುತ್ತಿದ್ದೇನೆ. ಹಿರಿಯರಾರಾದರೂ ದಾರಿ ತೋರಿಸಿ ಹರಸಿದರೆ ಉಪಕೃತನಾಗುವೆ.

ರವೀಂದ್ರಬಾಬುಗಳನ್ನರಿಯದ ಭಾರತೀಯನಿಲ್ಲ ಅವರ ಕೃತಿಯನ್ನು ಕುರಿತು ಇಲ್ಲಿ ಹೇಳುವುದು ಅನಾವಶ್ಯಕ. ಅವರು ಒರೆದ 'ನಷ್ಟ-ನೀಡ್' ಅನ್ನು ಹಿಂದಿಯಿಂದ ಕನ್ನಡಕ್ಕೆ ಅನುವಾದ ಮಾಡಲು ಕೇಳಿದ ಕೂಡಲೇ ಅಪ್ಪಣೆ ಕೊಟ್ಟ ಹಿಂದೀ-ಗ್ರಂಥ ರತ್ನಾಕರ-ಕಾರ್ಯಾಲಯದ ಒಡೆಯರಾದ ಶ್ರೀ ನಾಥುರಾಮ ಪ್ರೇಮಿಯವರಿಗೆ ತುಂಬಾ ಧನ್ಯವಾದಗಳು.

ಸಹರ್ಷದಿಂದ 'ಹಾಳು ಮನೆ'ಯಲ್ಲಿ ದೀಪ ಹಚ್ಚಿ ಬೆಳಗಿಸಲು ಮುಂದೆ ಬಂದ ಹುಬ್ಬಳ್ಳಿಯ ಸಾಹಿತ್ಯ ಭಾಂಡಾರದ ಒಡೆಯರ ಉಪಕಾರವನ್ನೂ ನೆನೆಸದಿರಲಾರೆ.

ವಿದ್ಯಾಮಂದಿರ,
ಹಾವೇರಿ
೭-೧೧-೪೭

ವಿದ್ವಜ್ಜನ ವಿಧೇಯ
**ಹೊಸಮನೆ ಗುಡ್ಡಪ್ಪ**
ವಿದ್ವಾನ್

# ಪರಿವಿಡಿ







# ಹಾಳು ಮನೆ

—০০:০০—

೧

ಭೂಪತಿರಾಯರಲ್ಲಿ ಹೇರಳ ಹಣವಿದ್ದಿತು. ದುಡಿಯುವ ಚಿಂತೆ ಅವರಿಗಿರಲಿಲ್ಲ. ದೇಶದ ಪರಿಸ್ಥಿತಿಯೂ ಹದಗೆಟ್ಟಿತ್ತು. ಆದರೆ ಅವರು ಕೈಕಟ್ಟಿಕೊಂಡು ಸುಮ್ಮನೆ ಕುಳ್ಳಿರುವ ಮನುಷ್ಯರಲ್ಲ. ಆದ್ದರಿಂದ ಅವರು ಒಂದು ಇಂಗ್ಲಿಷ್ ವರ್ತಮಾನಪತ್ರಿಕೆಯನ್ನು ಹೊರಡಿಸಬೇಕೆಂದು ಮನಸ್ಸು ಮಾಡಿದರು. ಆ ಮೇಲೆ ಅವರು ಯೋಚಿಸಿದ್ದನ್ನು ಯಾರೂ ಕಾಣಲಿಲ್ಲ.

ಹುಡುಗರಿದ್ದಾಗಲೇ ಅವರು ಇಂಗ್ಲಿಷಿನಲ್ಲಿ ಲೇಖ ಬರೆಯುತ್ತಿದ್ದರು, ಭಾಷಣ ಮಾಡುತ್ತಿದ್ದರು. ಅಂತಹ ಅವಶ್ಯಕತೆ ತೋರದಿದ್ದರೂ ಇಂಗ್ಲಿಷ್ ವರ್ತಮಾನಪತ್ರಿಕೆಗಳಿಗೆ ಲೇಖ ಕಳಿಸುತ್ತಿದ್ದರು. ಸಭೆ ಸಮಾರಾಧನೆಗಳಲ್ಲಿ ನಾಲ್ಕು ಮಾತು ಆಡದೆ ಸುಮ್ಮನಿರುತ್ತಿರಲಿಲ್ಲ

ರಾಯರು ಅನುಕೂಲವುಳ್ಳವರು. ಇವರನ್ನು ರಾಜಕೀಯ ಮುಂದಾಳುಗಳು ತಮ್ಮ ಸಂಘ-ಸಂಸ್ಥೆಗಳಿಗೆ ಸಹಾಯವು ಸಿಗಬಹುದೆಂದು ಮುಕ್ತಕಂಠದಿಂದ ಹೊಗಳತೊಡಗಿದರು. ಆದರಿಂದ ತಮ್ಮ ರಚನಾ-ಶಕ್ತಿಯಲ್ಲಿ ಭೂಪತಿರಾಯರಿಗೆ ತುಂಬಾ ನಂಬುಗೆ ಹುಟ್ಟಿತು.

ಉಮಾಪತಿರಾಯರು ರಾಯರಿಗೆ ಅಳಿಯಂದಿರು. ಇವರು ವಕಾಲತ್ತಿನಲ್ಲಿ ಫೇಲು ಆದರು. ಅವರು "ಮಾವ, ನೀವು ಒಂದು ಇಂಗ್ಲಿಷ್ ಪತ್ರಿಕೆ ಹೊರಡಿಸಿ. ನಿಮ್ಮ ಅಸಾಧಾರಣ. . . . . . ." ಮುಂತಾಗಿ ಭೂಪತಿರಾಯರ ಬೆನ್ನು ಚಪ್ಪರಿಸಿದರು.

ಭೂಪತಿರಾಯರು ಹಿರಿ-ಹಿರಿ ಹಿಗ್ಗಿದರು. ಬೇರೆಯವರ ಪತ್ರಿಕೆಗೆ ಲೇಖ ಕಳಿಸಿದರೆ ಏನು ಬಂತು ? ನಮ್ಮದೇ ಪತ್ರಿಕೆಯಾದರೆ ನಮ್ಮ ಲೇಖನಿಯನ್ನು ನಮಗೆ ಹೇಗೆ ಬೇಕೊ ಹಾಗೆ ಓಡಿಸಬಹುದು ; ಇಷ್ಟೇ ಅಲ್ಲ, ಅಳಿಯಂದಿರು ಬೇರೆ ನೆರವಿಗೆ ಇದ್ದಾರೆ ; ಮುಂತಾಗಿ ರಾಯರು ಆಲೋಚನೆ ಹಾಕಿದರು. ಕೊನೆಗೆ ಎಳೆಯ ವಯಸ್ಸಿನಲ್ಲಿಯೇ ಸಂಪಾದಕತ್ವದ ಗದ್ದುಗೆಯನ್ನೇರಿದರು.

ಚಿಕ್ಕ ವಯಸ್ಸಿನಲ್ಲಿ ಸಂಪಾದಕತ್ವದ ಹಾಗೂ ರಾಜಕೀಯದ ನಿಶೆ ತಲೆಗೇರುವುದು ಬಹಳ ಬೇಗ. ಇಷ್ಟೇ ಅಲ್ಲ, ಭೂಪತಿರಾಯರ ಬೆನ್ನು ತಸ್ಪರಿಸಲು ಬಹಳ ಮಂದಿ ಗಣಗಳೂ ಹುಟ್ಟಿದರು.

ಹೀಗೆ ರಾಯರು ಇತ್ತ ಪತ್ರಿಕೆಯ ಚಕ್ರದಲ್ಲಿ ಸಿಕ್ಕಿಬೀಳುತ್ತಿದ್ದಾಗ ಅತ್ತ ರಾಯರ ಹೆಂಡತಿ ಚಾರುಲತಾ ಮೆಲ್ಲಮೆಲ್ಲಗೆ ಹರೆಯದ ಹೊಸ್ತಿಲೊಳಗೆ ಅಡಿ ಇಡುತ್ತಿದ್ದಳು. ಆದರೆ ಈ ಸಂಪಾದಕ ಮಹಾಶಯರಿಗೆ ಈ ದೊಡ್ಡ ಸುದ್ದಿಯ ಸುಳಿವೇ ಇರಲಿಲ್ಲ. ಭಾರತ ಸರಕಾರದ ವಿದೇಶ ಧೋರಣೆ ಮೆಲ್ಲ ಮೆಲ್ಲಗೆ ಬೆಳೆಯುತ್ತಿರುವ ಸಂಯಮದ ಕಟ್ಟನ್ನೊಡೆಯಲಿಚ್ಛಿಸುತ್ತದೆ,—ಇದೇ ರಾಯರಿಗೆ ಪ್ರಧಾನ ಲಕ್ಷ್ಯದ ವಿಷಯವಾಗಿದ್ದಿತು.

ಪತಿದೇವರು ಹಣವಂತರು. ಅದರಿಂದ ಚಾರುಲತೆಗೆ ಏನೂ ಕೆಲಸ ಮಾಡುವ ಸಂದರ್ಭವೇ ಬರುತ್ತಿರಲಿಲ್ಲ. ಆದರ ಫಲವೆಂದರೆ ಪರಿಣಾಮಶೂನ್ಯ ಪುಷ್ಪದಂತೆ ಪರಿಪೂರ್ಣ ಆವಶ್ಯಕತೆಗಳ ಮಧ್ಯದಲ್ಲಿ ಪ್ರಸ್ಫುಟಿತವಾಗುವುದೇ ಅವಳ ನಿಶ್ಚೇಷ್ಟ ದೀರ್ಘವಾದ ಹಗಲಿರುಳಿನ ಏಕಮಾತ್ರ ಕೆಲಸವಾಯಿತು. ಅವಳಿಗೆ ಮತ್ತೆ ಯಾವುದರ ಕೊರತೆಯೂ ಇರಲಿಲ್ಲ.

ಹೀಗಿರುವಾಗ ಸಂದರ್ಭ ಸಿಕ್ಕುವುದೊಂದೇ ತಡ, ಹೆಂಡತಿ ತನ್ನ ಗಂಡನನ್ನು ಕುರಿತು ಬಹಳ ಆಗ್ರಹ ಮಾಡುವಳು. ಮತ್ತೆ ದಾಂಪತ್ಯಲೀಲೆಯ ಸೀಮಾಂತ ನೀತಿ, ಗೃಹಸ್ಥಿತಿಯ ಸಂಪೂರ್ಣ ಸೀಮೆಯನ್ನುಲ್ಲಂಘಿಸಿ ಸಮಯದಿಂದ ಅಸಮಯಕ್ಕೆ ವಿಹಿತದಿಂದ ಅವಿಹಿತದತ್ತ ಸಾಗುತ್ತದೆ. ಚಾರುಲತೆಗೆ ಆ ಸಮಯವು ಸಿಗಲಿಲ್ಲ. ವೃತ್ತಪತ್ರದ ಬಲವಾದ ಕೋಟೆಯನ್ನು ಭೇದಿಸಿ ಪತಿದೇವರನ್ನು ಅಂಕಿತದಲ್ಲಿಟ್ಟುಕೊಳ್ಳುವುದು ಅವಳಿಗೆ ಕಠಿನವಾಗಿತ್ತು.

ಹರೆಯದ ಹೆಂಡತಿಯತ್ತ ಗಮನವನ್ನೆಳೆದು ಯಾರೋ ನಿಕಟ ಬಂಧುಗಳೊಬ್ಬರು ಭೂಪತಿರಾಯರಿಗೆ ಸಿಟ್ಟುಮಾಡಿದರು. ಆಗ ಅವರು ಸಚೇತರಾಗಿ "ಹಾಗಾದರೆ ಚಾರುವಿನ ಜೊತೆಗೆ ಒಬ್ಬ ಗೆಳತಿಯನ್ನಿಡುವುದು ಅತ್ಯಂತ ಆವಶ್ಯಕ. ಪಾಪ, ಒಬ್ಬಳೇ ಕುಳಿತುಕೊಂಡು ಅವಳಿಗೆ ಬೇಸರವಾಗಬಹುದು" ಎಂದರು.

"ನಿಮ್ಮ ಮನೆಯವರು ನಮ್ಮಲ್ಲಿಗೆ ಬರಬಾರದೆ? ಓರಗೆಯ ಹೆಂಗುಸರಾರೂ ಹತ್ತಿರ ಇಲ್ಲ. ಪಾಪ, ಚಾರುಲತೆಗೆ ಮನೆ ಹಾಳುಗರೆಯುತ್ತಿರಬಹುದು."—ಅಳಿಯ ಉಮಾಪತಿರಾಯರು ಹೇಳಿದರು.

ಸ್ತ್ರೀ–ಸಂಗದ ಅಭಾವವೇ ಚಾರುವಿಗೆ ಅತ್ಯಂತ ದುಃಖದಾಯಕವಾಗಿದ್ದಿತು. ಸಂಪಾದಕ ಮಹಾಶಯರಿಗೂ ಇದು ಹೊಳೆಯಿತು. ಆದ್ದರಿಂದ ಅಳಿಯಂದಿರ ಹೆಂಡತಿ ಮಂದಾಕಿನಿಯನ್ನು ತಮ್ಮಲ್ಲಿಗೆ ಕರೆಸಿಕೊಂಡು ನಿಶ್ಚಿಂತರಾದರು.

ಪತಿ–ಪತ್ನಿಯರು, ಪರಸ್ಪರರು ಪ್ರೇಮೋನ್ಮೇಷದ ಪ್ರಥಮ ಅರುಣಾಲೋಕದಲ್ಲಿ ಅಪೂರ್ವ ಮಹಿಮೆಯಿಂದ ಮಂಡಿತ ಚಿರನವೀನತೆಯನ್ನು ನೋಡಿದರು. ಆಗ ಅವರಿಗೆ ದಾಂಪತ್ಯದ ಆ ಸುವರ್ಣಪ್ರಭೆಯಿಂದ ಮಂಡಿತ ಸುಪ್ರಭಾತವು ಅಚೇತನ ಅವಸ್ಥೆಯಲ್ಲಿ ಯಾವಾಗ ಕಳೆದುಹೋಯಿತೊ ತಿಳಿಯಲಿಲ್ಲ. ನೂತನತ್ವದ ಸ್ವಾದವು ತಿಳಿಯುತ್ತಲೇ ಇಬ್ಬರೂ ಒಬ್ಬರಿಗೊಬ್ಬರು ಹಳೆಯ ಗುರುತು–ಪರಿಚಯುವಿದ್ದವರಂತೆ ಕಾಣತೊಡಗಿದರು.

ಚಾರುಲತೆಗೆ ಓದು–ಬರೆಹದತ್ತ ಒಂದು ಬಗೆಯ ಸ್ವಾಭಾವಿಕ ಆಕರ್ಷಣವಿದ್ದಿತು. ಅದರಿಂದ ಅವಳು ಬೇಸರವಿಲ್ಲದೆ ದಿನಗಳೆಯುತ್ತಿದ್ದಳು. ತಾನೇ ಪ್ರಯತ್ನಪಟ್ಟು, ಅನೇಕ ಉಪಾಯಗಳಿಂದ, ತನ್ನ ಓದಿನ ವ್ಯವಸ್ಥೆಯನ್ನು ಮಾಡಿಕೊಂಡಿದ್ದಳು. ಭೂಪತಿರಾಯರ ಸೋದರಳಿಯ ಅಮಲನು ಥರ್ಡ್–ಇಯರಿನಲ್ಲಿ ಓದುತ್ತಿದ್ದ. ಚಾರುಲತೆ ಓದುತ್ತಿದ್ದುದು ಅವನ ನೆರವಿನಿಂದ. ಆದ್ದರಿಂದ ಅವಳು ಅವನ ದಾಕ್ಷಿಣ್ಯವನ್ನು ಕಾಯ್ದುಕೊಳ್ಳಬೇಕಾಗುತ್ತಿದ್ದಿತು. ಚಾರುಲತೆ ಅವನಿಗೆ ಆಗಾಗ ಹೋಟಿಲಿನ ವೆಚ್ಚಕ್ಕೂ ಇಂಗ್ಲಿಷ್ ಪುಸ್ತಕಗಳನ್ನು ಕೊಳ್ಳಲಿಕ್ಕೂ ನೆರವಾಗುತ್ತಿದ್ದಳು. ಅಮಲನು ಆಗಾಗ ತನ್ನ ಗೆಳೆಯರನ್ನು ಹೋಟಿಲಿಗೆ ಕರೆದುಕೊಂಡು ಹೋಗುತ್ತಿದ್ದ. ಅದರ ವೆಚ್ಚವನ್ನು ಗುರುದಕ್ಷಿಣಾಸ್ವರೂಪವೆಂದು ಚಾರುಲತೆ ತಾನೇ ನೋಡಿಕೊಳ್ಳುತ್ತಿದ್ದಳು. ರಾಯರು ಮಾತ್ರ ಚಾರುಲತೆಯನ್ನು ಏನೂ ಕೇಳುತ್ತಿರಲಿಲ್ಲ; ಆದರೆ ಸೋದರಳಿಯ ಅಮಲನಾದರೋ ಅಲ್ಪಸ್ವಲ್ಪ ಓದು ಹೇಳಿ ಎಷ್ಟೋ ಬೇಡಿಕೆಗಳನ್ನು ಮುಂದಿಡುತ್ತಿದ್ದ. ಅದಕ್ಕೆ ತುದಿಮೊದಲೇ ಇರುತ್ತಿರಲಿಲ್ಲ. ಇದರಿಂದ ಚಾರುಲತೆ ಆಗಾಗ ಕೃತ್ರಿಮ ಕೋಪವನ್ನೂ ವಿದ್ರೋಹದ ಭಾವವನ್ನೂ ತೋರ್ಪಡಿಸುತ್ತಿದ್ದಳು. ಆದರೆ ಒಬ್ಬ ಸಜ್ಜನನಿಗೆ ನೆರವಾಗುವುದು, ಅವನ ಸ್ನೇಹದ ಉಪದ್ರವವನ್ನು ಸಹಿಸಿಕೊಳ್ಳುವುದು ಅವಳಿಗೆ ಒಂದು ಸಂತೋಷದ ಸಂಗತಿಯಾಗಿತ್ತು.

"ಅಕ್ಕ, ನಮ್ಮ ಕಾಲೇಜಿನಲ್ಲಿ ರಾಜನ ಅಳಿಯನೊಬ್ಬನು ಓದುತ್ತಾನೆ.

ರಾಣಿವಾಸದಲ್ಲಿ ಸ್ವತಃ ಕೈಯಿಂದ ಹೆಣೆದ ಕಾರ್ಪೆಟ್ಟಿನ ಕಾಲುಚೀಲ ಹಾಕಿಕೊಂಡು ಬರುತ್ತಾನೆ. ನೋಡು, ನಾನು ಹೇಗೆ ಸುಮ್ಮನಿರಲಿ,—ನನಗೆ ಕಾರ್ಪೆಟ್ಟಿನ ಕಾಲುಚೀಲ ಬೇಕು ನೋಡು. ಇಲ್ಲವಾದರೆ ಮರ್ಯಾದೆ ಉಳಿಯುವುದಿಲ್ಲ!" ಎಂದ ಅಮಲ.

"ಹೂಂ, ನನಗೆ ಇದೊಂದೇ ಕೆಲಸವಲ್ಲ. ನಿನಗೆಲ್ಲಿ ಹೆಣೆದುಕೊಡಲಿ? ಬೇಕಾದರೆ ದುಡ್ಡು ಕೊಡುತ್ತೇನೆ, ಬೇಕಾದವುಗಳನ್ನು ಕೊಂಡುಕೊ"—ಚಾರು ಎಂದಳು.

"ಅದು ಆಗದ ಮಾತು."

ಕಾಲುಚೀಲ ಹೆಣೆಯುವುದನ್ನು ಚಾರು ಅರಿಯಳು. ಅಮಲನಿಗೆ ಇದನ್ನು ತಿಳಿಯಪಡಿಸುವ ಮನಸ್ಸು ಅವಳಿಗಿಲ್ಲ. ಅಮಲನು ಬೇಡುತ್ತಾನೆ ಎಂದಮೇಲೆ ಅವನ ಬೇಡಿಕೆಯನ್ನು ಪೂರೈಸದೆ ಬಿಡುವುದೆ? ಆದ್ದರಿಂದ ಅವನು ಕಾಲೇಜಿಗೆ ಹೋದಮೇಲೆ ಅವಳು ಮುಚ್ಚುಮರೆಯಲ್ಲಿ ಮನಸ್ಸುಗೊಟ್ಟು ಕಾರ್ಪೆಟ್ ಹೆಣೆಯಲು ಕಲಿಯತೊಡಗಿದಳು. ಆದರೆ ಇತ್ತೀಚೆ ಅಮಲನು ಕಾಲುಚೀಲದ ಮಾತನ್ನು ಸಂಪೂರ್ಣವಾಗಿ ಮರೆತುಬಿಟ್ಟ. ಒಂದು ಸಂಜೆ ಚಾರು ಅಮಲನನ್ನು ಕರೆದಳು

ಆಗ ಬೇಸಗೆ. ಮಾಳಿಗೆಯ ಮೇಲೆ ಆಸನಗಳನ್ನು ಹಾಕಿದ್ದರು. ಚಾರು ತಟ್ಟೆಯಲ್ಲಿ ಉಣಬಡಿಸಿದಳು. ಕಸಕಡ್ಡಿ ಬೀಳುವುದೆಂದು ತಟ್ಟೆಗೆ ಹಿತ್ತಾಳೆಯ ಮುಚ್ಚಳವನ್ನು ಮುಚ್ಚಿದ್ದಳು. ಅಮಲನು ಕಾಲೇಜಿನ ಬಟ್ಟೆಗಳನ್ನು ಕಳಚಿ ಕೈಕಾಲುಗಳನ್ನು ತೊಳೆದುಕೊಂಡು ಅಣಿಯಾಗಿ ಮೇಲೆ ಹತ್ತಿ ಹೋದ.

ಅಮಲನು ಆಸನದ ಮೇಲೆ ಕುಳಿತುಕೊಂಡ! ಮುಚ್ಚಳವನ್ನು ಓರೆ ಮಾಡಿ ನೋಡುತ್ತಾನೆ—ತಟ್ಟೆಯಲ್ಲಿ ಬಹಳೇ ಬೆಲೆಬಾಳುವ ಉಣ್ಣೆಯ ಕಾರ್ಪೆಟ್ಟಿನ ಕಾಲುಚೀಲಗಳು! ಚಾರುಲತೆ ಗಹಗಹಿಸಿ ನಗತೊಡಗಿದಳು.

ಕಾಲುಚೀಲಗಳನ್ನು ಕಂಡ ಕೂಡಲೇ ಅಮಲನ ಬಯಕೆ ಇನ್ನೂ ಹೆಚ್ಚಿತು. ಇನ್ನು ಸ್ಕಾರ್ಫು ಬೇಕು; ರೇಷಿಮೆಯ ವಸ್ತ್ರದ ನಾಲ್ಕು ಅಂಚಿಗೂ ಹೂವು, ಹೂವಿನ ಕುಸುರು ಬೇಕು; ಅವನ ಹೊರಗಿನ ಕುಳಿತುಕೊಳ್ಳುವ ಕೋಣೆಯಲ್ಲಿ ಒಂದು ಆರಾಮ್‌ಕುರ್ಚಿ ಇದೆ. ಅದಕ್ಕೆ ಎಣ್ಣೆ ತಗಲಿ ಕಲೆಗಳಾಗಿವೆ. ಅವರ ಮೇಲೆ ಹಾಕಲು ರೇಷಿಮೆ ಕಸೂತಿಯ ಕೆಲಸ ಮಾಡಿದ

ಒಂದು ಚೀಲ ಬೇಕು!

ಚಾರುಲತೆ ಪ್ರತಿ ಸಲವೂ ಅವನನ್ನು ವಿರೋಧಿಸುತ್ತಿದ್ದಳು, ಅವನೊಂದಿಗೆ ಕಾದಾಡುತ್ತಿದ್ದಳು. ಆದರೆ ಕೊನೆಗೆ ಪ್ರತಿ ಸಲವೂ ಬಹಳ ಪ್ರಯತ್ನಪೂರ್ವಕವಾಗಿ ಸ್ನೇಹದಿಂದ ಅವನ ಇಚ್ಛೆಯನ್ನು ಈಡೇರಿಸುತ್ತಿದ್ದಳು. "ಅತ್ತಿಗೆ, ಎಲ್ಲಿಗೆ ಬಂತು?" ಎಂದು ಅವನು ಆಗಾಗ ಕೇಳಿಯೂ ಕೇಳುತ್ತಿದ್ದ.

"ಇನ್ನೂ ಕೆಲಸಕ್ಕೆ ಕೈಯನ್ನೇ ಹಾಕಿಲ್ಲ."—ಚಾರುಲತೆ ಸುಳ್ಳು ಹೇಳುತ್ತಿದ್ದಳು — "ಅಹುದು, ನನಗೆ ನೆನಪೇ ಇರಲಿಲ್ಲ" ಎಂದೂ ಒಮ್ಮೊಮ್ಮೆ ಹೇಳಿಬಿಡುತ್ತಿದ್ದಳು.

ಆದರೆ ಅಮಲನು ಬಿಡುವನೆ? ದಿನಾಲು ನೆನಪು ಮಾಡುತ್ತಿದ್ದ; ಹಟವನ್ನೂ ಹಿಡಿಯುತ್ತಿದ್ದ. ಆವನು ಕೈತೊಳೆದುಕೊಂಡು ಬೆನ್ನು ಹತ್ತುತ್ತಿದ್ದ. ಅವನ ಕಾಟಕ್ಕೆ ಚಾರು ಉದ್ರೇಕಗೊಳ್ಳುತ್ತಿದ್ದಳು. ತನ್ನ ಔದಾಸೀನ್ಯತೆಯನ್ನು ವ್ಯಕ್ತಪಡಿಸಿ ವಿರೋಧಿಸುತ್ತಿದ್ದಳು. ಮತ್ತೆ ಒಮ್ಮೆಲೇ ಒಂದು ದಿನ ಆತನ ಬೇಡಿಕೆಯನ್ನು ಪೂರೈಸಿ ಕೌತುಕಪಡಿಸುತ್ತಿದ್ದಳು.

ಚಾರು ಶ್ರೀಮಂತ ಗಂಡನ ಕೈ ಹಿಡಿದಿದ್ದಾಳೆ. ಅವಳು ಏನೂ ಮಾಡಬೇಕಾದುದಿಲ್ಲ. ಆದರೆ ಅಮಲನು ಮಾತ್ರ ಗಂಟುಬಿದ್ದು ಅವಳಿಂದ ಕೆಲಸ ಮಾಡಿಸದೆ ಬಿಡುವುದಿಲ್ಲ. ಈ ಎಲ್ಲ ಷೋಕಿಯಿಂದ ಅವಳ ಹೃದಯಕ್ಕೆ ನೆಮ್ಮದಿಯೆನಿಸುತ್ತಿತ್ತು.

ಭೂಪತಿರಾಯರ ಅಂತಃಪುರದಲ್ಲಿ ಸ್ವಲ್ಪ-ಬೈಲು ನೆಲವಿದ್ದಿತು. ಅದಕ್ಕೆ ಉಪವನವೆಂಬ ದೊಡ್ಡ ಹೆಸರು ಒಪ್ಪುತ್ತಿರಲಿಲ್ಲ. ಇರಲಿ. ಆ ಉಪವನದಲ್ಲಿ ಒಂದು ಮುಖ್ಯ ವನಸ್ಪತಿ ಇದ್ದಿತು—ವಿಲಾಯತಿಯ ಒಂದು ಗಿಡ.

ಈ ಜೀವನವನ್ನು ಸಾರ್ಥಕ ಮಾಡಿಕೊಳ್ಳಲು ಚಾರು ಅಮಲರಿಬ್ಬರೂ ಕೂಡಿ ಒಂದು ಆಲೋಚನೆ ಮಾಡಿಕೊಂಡಿದ್ದಾರೆ. ಕೆಲವು ದಿನಗಳಿಂದ ಇಬ್ಬರೂ ಕೂಡಿ ಒಂದು ಕಾಗದದ ಮೇಲೆ ನಕಾಶ ತೆಗೆದು ಬಹಳ ಉತ್ಸಾಹದಿಂದ ಈ ನೆಲದ ಮೇಲೆ ಉಪವನವನ್ನು ಕಲ್ಪಿಸುತ್ತಿದ್ದರು.

'ಅಕ್ಕ,' ಅಮಲನೆಂದ 'ನಮ್ಮ ಈ ತೋಟದ ಗಿಡಗಳಿಗೆ ನೀನು ಹಿಂದಿನ ರಾಜಕುಮಾರಿಯರಂತೆ ನಿನ್ನ ಕೈಯಿಂದಲೇ ನೀರು ಹಾಕಬೇಕು.'

"ನೋಡು, ಆ ಮೂಲೆಯಲ್ಲಿ ಹಿಂದೆ ಒಂದು ಗುಡಿಸಲು ಹಾಕಬೇಕು. ಅಲ್ಲಿ ಜಿಂಕೆಗಳಿರುವವು" ಚಾರು ಹೇಳಿದಳು.

“ ಮತ್ತೆ ಒಂದು ಚಿಕ್ಕ ಒಸರು ಹರಿಯುವಂತೆ ಮಾಡಬೇಕು. ಅದರಲ್ಲಿ ಹಂಸವು ಈಜಬೇಕು ” ಅಮಲನೆಂದ.

ಚಾರುಲತೆ ಈ ಯೋಜನೆಯನ್ನು ಬೆಂಬಲಿಸುತ್ತ ‘ ಹಾಗಾದರೆ ಅದರಲ್ಲಿ ನೀಲಕಮಲಗಳನ್ನು ನೆಡುತ್ತೇನೆ. ಬಹಳ ದಿವಸಗಳಿಂದ ನನಗೆ ನೀಲ ಕಮಲಗಳನ್ನು ನೋಡಬೇಕೆಂದು ಹಾರೈಕೆ ಇದೆ ’ ಎಂದಳು.

“ ಅದಕ್ಕೆ ಒಂದು ಸೇತುವೆ ಕಟ್ಟಬೇಕು. ಗಟ್ಟದ ಹತ್ತಿರ ಒಂದು ಚಿಕ್ಕ ದೋಣಿ ಕಟ್ಟಿದ್ದಾರೆ ” —ಹೇಳಿದ ಅಮಲ.

“ ಗಟ್ಟವನ್ನು ಬಿಳಿಯ ಕಲ್ಲಿನಿಂದ ಕಟ್ಟಬೇಕು—” ಚಾರು ಎಂದಳು .

ಅಮಲನು ಕಾಗದ ಸೀಸಕಡ್ಡಿ ಕೈಗೆ ತೆಗೆದುಕೊಂಡ. ಗೆರೆ ಎಳೆದು ಕಂಪಾಸಿನ ಸಹಾಯದಿಂದ ದೊಡ್ಡ ಆಡಂಬರದ ಒಂದು ನಕಾಶವನ್ನು ಸಿದ್ಧ ಪಡಿಸಿದ.

ಪ್ರತಿದಿನವೂ ಇಬ್ಬರೂ ಸೇರುವರು, ಹಂಚಿಕೆಗಳನ್ನು ಹಾಕಿಯೇ ಹಾಕು ವರು, ಮತ್ತೆ ಅದರಲ್ಲಿ ಬದಲಾವಣೆ ಮಾಡುವರು. ಹೀಗೆ ಇಪ್ಪತ್ತು–ಇಪ್ಪತ್ತೈದು ನಕಾಶಗಳು ಅಣಿಯಾದವು.

‘ ಮ್ಯಾಪ್ ’ ಸಿದ್ಧವಾಯಿತು. ಆದರೆ ವೆಚ್ಚವೆಷ್ಟು ಬರುವುದೆಂದು ಒಂದು ಅಂದಾಜು ಸಿದ್ಧಪಡಿಸತೊಡಗಿದರು. ತನಗೆ ಬರುವ ಹಣದಿಂದಲೇ ಉದ್ಯಾನದ ವ್ಯವಸ್ಥೆಗೂ ಹಣ ಒದಗಿಸಬಹುದೆಂದು ಚಾರು ಮೊದಲು ಯೋಚಿಸಿದಳು. ಮನೆಯೊಳಗೆ ಏನು ನಡೆದರೂ ರಾಯರಿಗೆ ಗೊತ್ತೇ ಇರುತ್ತಿರಲಿಲ್ಲ. ಉದ್ಯಾನವು ಸಿದ್ಧವಾದ ಮೇಲೆ ಅವಳು ಅಲ್ಲಿಗೆ ಗಂಡನಿಗೆ ಆಮಂತ್ರಣ ಕೊಟ್ಟು ಅವನು ಆಶ್ಚರ್ಯಪಡುವಂತೆ ಮಾಡಿದಳು. ಅಲ್ಲಾ ಉದ್ದೀನನು ದೀಪದ ನೆರವಿನಿಂದ ಜಪಾನಿನಿಂದ ಉದ್ಯಾನವನ್ನೇ ಎತ್ತಿಕೊಂಡು ಬಂದಿದ್ದ. ರಾಯರು ಏನೇನೋ ಯೋಚನೆ ಮಾಡುವರು.

ಕಡಿಮೆ ವೆಚ್ಚವು ಬರುವಂತೆ ‘ ಎಸ್ಟಿಮೇಟ್ ’ ಸಿದ್ಧಪಡಿಸಿದರೂ ಅದು ಚಾರುವಿನ ಮನಸ್ಸಿಗೆ ಬರಲಿಲ್ಲ. ಅಷ್ಟು ಹಣವನ್ನವಳು ತರುವುದೆಲ್ಲಿಂದ? ಆದ್ದರಿಂದ ಮತ್ತೆ ಅಮಲನು ಒಂದು ನಕಾಶವನ್ನು ಅಣಿಮಾಡಿದ. ಅದರಲ್ಲಿ ಬಹಳ ಹೆಚ್ಚು-ಕಡಿಮೆಗಳನ್ನು ಮಾಡಿದ್ದ.

“ ಅಕ್ಕ, ಇನ್ನೊಂದು ಕೆಲಸ ಮಾಡಿದರೆ ಹೇಗೆ ? ಇದರೊಳಗಿನ ಈ ಒಸರು ತೆಗೆದುಬಿಡೋಣ ” —ಅಮಲನು ಹೇಳಿದ.

" ಬೇಡ-ಬೇಡ, ಒಸರು ಬಿಟ್ಟರೆ ಆದರಲ್ಲಿ ಉಳಿಯುವುದಾದರೂ ಏನು ! ಅದರಲ್ಲಿ ನನ್ನ ನೀಲಕಮಲವಿದೆ " ಎಂದಳು ಚಾರು.

" ಮತ್ತೆ ಹರಿಣದ ಗುಡಿಸಲಿಗೆ ತಾಳವೃಕ್ಷದ ಗರಿಗಳನ್ನು ಹೊದ್ದಿಸಬೇಕೆ? ಹುಲ್ಲು ಹೊದಿಸಿದರೆ ಹೇಗೆ ? " ಅಮಲನು ಕೇಳಿದ.

ಚಾರುವಿಗೆ ಸಿಟ್ಟು ಬಂದಿತು—" ಇರಲಿ ಬಿಡು. ನನಗೇನೂ ಆ ಮನೆ ಬೇಕಾಗಿಲ್ಲ, ಹೋಗಲಿ " ಎಂದಳು ಅವಳು.

ಮಾರಿಶಸ್ಸಿನಿಂದ ಲವಂಗ, ಕರ್ನಾಟಕದಿಂದ ಗಂಧ, ಸಿಂಹಳದ್ವೀಪದಿಂದ ದಾಲಚಿನ್ನಿಯ ಗಿಡಗಳನ್ನು ತರಿಸುವ ಯೋಚನೆ ಇದ್ದಿತು. ಅಮಲನು ಅದನ್ನು ಬಿಟ್ಟು ಮಾನಿಕ್‌ತಲ್ಲೆಯ ತೋಟದಿಂದ ಸಾಧಾರಣ ದೇಶೀಯ ಹಾಗೂ ಪರದೇಶೀಯ ಗಿಡಗಳನ್ನು ತರಿಸಲು ಹೇಳಿದ. ಚಾರು ಮೋರೆ ತಿರುವಿ ಕುಳಿತುಕೊಂಡು " ಇರಲಿ ಬಿಡು, ನನಗೇನೂ ತೋಟವು ಬೇಡ " ಎಂದಳು.

'ಎಸ್ಟಿಮೇಟ'ನ್ನು ಕಡಮೆ ಮಾಡುವ ಬಗೆ ಇದಲ್ಲ. 'ಎಸ್ಟಿಮೇಟ'ನ ಜೊತೆಗೇ ಯೋಚನೆಗಳನ್ನೂ ಅದುಮುವುದು ಚಾರುವಿಗೆ ಅಸಾಧ್ಯವೆನಿಸಿತು. ಅಮಲನು ಬಾಯಿಂದ ಏನೇ ಆಡಲಿ, ಅವನಿಗೂ ಇದು ಸರಿಬರಲಿಲ್ಲ.

" ಅಕ್ಕ, ಹೀಗೆ ಮಾಡಬಾರದೆ ? ಉಪವನವನ್ನು ಕುರಿತು ಅಣ್ಣನಿಗೆ ಹೇಳು. ಅವರು ಖಂಡಿತವಾಗಿ ರೂಪಾಯಿ ಕೊಟ್ಟೇ ಕೊಡುವರು " ಹೇಳಿದ ಅಮಲ.

" ಬೇಡ, ಅವರಿಗೆ ಹೇಳಿದರೆ ಮೋಜೆನಿಸುವುದಿಲ್ಲ. ನಾವಿಬ್ಬರೂ ಕೂಡಿಯೇ ಉಪವನವನ್ನು ಅಣಿಮಾಡುವಾ. ಅವರು ಇಂಗ್ಲಿಷ್ ಕಂಪನಿಗೆ ಆರ್ಡರ್ ಕೊಟ್ಟು ಇದನ್ನು ' ಈಡ್‌ನ್ ಗಾರ್ಡ್‌ನ್ ' ಮಾಡಬಲ್ಲರು—ಎಂದರೆ ನಮ್ಮ ಪ್ಲ್ಯಾನು ಮಣ್ಣುಗೂಡುವುದು " ಎಂದಳು ಚಾರು.

ಚಾರು ಅಮಲರಿಬ್ಬರೂ ಅಮಟೆ ಗಿಡದ ನೆರಳಿಗೆ ಕುಳಿತುಕೊಂಡರು. ಅವರು ಅಸಾಧ್ಯ ಸಂಕಲ್ಪದ ಕಲ್ಪನಾ-ಸುಖಸಮುದ್ರದಲ್ಲಿ ಮುಳು-ಮುಳುಗಿ ಏಳುತ್ತಿದ್ದರು. " ಇಷ್ಟು ಹೊತ್ತಿನಿಂದ ನೀವಿಬ್ಬರೂ ತೋಟದಲ್ಲಿ ಏನು ಮಾಡುತ್ತಿದ್ದೀರಿ ? "— ಮಂದಾಕಿನಿ ಎರಡನೇ ಮಹಡಿಯ ಮೇಲೆ ನಿಂತೇ ಕೂಗಿದಳು.

" ಬಲಿತ ಅಮಟೆಕಾಯಿ ಹುಡುಕುತ್ತಿದ್ದೇನೆ " ಎಂದಳು ಚಾರು.

"ಸಿಕ್ಕರೆ ನನಗೂ ತೆಗೆದುಕೊಂಡು ಬಾ"— ಆಸೆಬುರುಕ ಮಂದಾಕಿನಿ ಹೇಳಿದಳು.

ಚಾರು ನಗತೊಡಗಿದಳು; ಅಮಲನೂ ನಕ್ಕ. ಅವರಿಬ್ಬರ ಸಂಕಲ್ಪಗಳು ಇಬ್ಬರನ್ನೂ ಬಂಧಿಸಿದ್ದವು. ಅದರಿಂದ ಅವರಿಗೆ ಹೆಚ್ಚಿನ ಆನಂದ, ಗೌರವಗಳೆನಿಸುತ್ತಿದ್ದಿತು. ಮಂದಾಕಿನಿಯಲ್ಲಿ ಬೇಕಾದ ಗುಣವಿರಲಿ, ಕಲ್ಪನಾಶಕ್ತಿ ಮಾತ್ರ ಇರಲಿಲ್ಲ. ಅವಳಿಗೆ ಈ ಮಾತುಗಳಲ್ಲಿ ರಸವೆಲ್ಲಿ ಸಿಗಬೇಕು? ಅವಳು ಇವರಿಬ್ಬರ ಮಂತ್ರಾಲೋಚನೆಯಿಂದ ಎಲ್ಲ ಬಗೆಯಿಂದಲೂ ದೂರವೇ ಇರುತ್ತಿದ್ದಳು.

ಅಂತೂ ಈ ಮಹಾ ಉಪವನದ 'ಎಸ್ಟಿಮೇಟ್' ಕಡಿಮೆಯಾಗಲಿಲ್ಲ; ಯೋಚನೆಗಳೂ ಕುಂದಲಿಲ್ಲ. ಆದರೂ ಹಲವು ದಿನಗಳವರೆಗೆ ಅಮಟೆ ಗಿಡದಡಿಯಲ್ಲಿ ಸಭೆ ನೇರುತ್ತಲೇ ಇದ್ದಿತು. ಒಸರಿನ ಸ್ಥಳವನ್ನು, ಜಿಂಕೆಯ ಗುಡಿಸಲನ್ನು, ಕಲ್ಲಿನ ಮೂರ್ತಿಯನ್ನು ತೋರಿಸಲು ಅಮಲನು ಸೀಸಕಡ್ಡಿಯಿಂದ ಗುರುತುಹಾಕಿದ್ದ.

ಆ ತೋಟದಲ್ಲಿ ಅಮಟೆ ಮರದಡಿಯಲ್ಲಿ ಒಂದು ಕಟ್ಟೆ ಕಟ್ಟುವರು. ಅಮಲನು ಅದರ ನಾಲ್ಕು ನಿಟ್ಟೆಗೂ ಗುರುತು ಹಾಕಿದ್ದ. ಇದೇ ಹೊತ್ತಿಗೆ ಚಾರು ಬಂದವಳೇ ಮರದ ನೆರಳಿಗೆ ಕುಳಿತುಕೊಂಡಳು. "ಅಮಲ, ನೀನು ಬರಹಗಾರನಾಗಿದ್ದರೆ ನೋಡು, ಎಷ್ಟು ಚನ್ನಾಗುತ್ತಿದ್ದಿತು!" ಎಂದಳು.

'ಹಾಗೆಂದರೆ?' ಅಮಲ ಕೇಳಿದ.

"ಎಂದರೆ ಈ ತೋಟದ ಬಣ್ಣನೆಯನ್ನು ನಿನ್ನಿಂದ ಮಾಡಿಸುತ್ತಿದ್ದೆ, ಒಂದು ಕತೆ ಬರೆಸುತ್ತಿದ್ದೆ. ಈ ಒಸರು, ಈ ಜಿಂಕೆಗಳ ಗುಡಿಸಲು, ಈ ಅಮಟೆ ಮರ, ಇವೆಲ್ಲ ಅದರಲ್ಲಿ ಕಾಣುತ್ತಿದ್ದವು. ನಮ್ಮಿಬ್ಬರನ್ನು ಬಿಟ್ಟರೆ ಮತ್ತೆ ಯಾರಿಗೂ ಇದು ಗೊತ್ತಿಲ್ಲ, ಗೊತ್ತಾಗುವಂತೆಯೂ ಇಲ್ಲ. ಬಹಳ ಮೋಜಾಗುತ್ತಿತ್ತು!"

'ಆಗಲಿ, ನಾನು ಬರೆದರೆ ಏನು ಕೊಡುವೆ?'

"ಏನು ಕೊಡಬೇಕು?"

"ನನ್ನ ಸೊಳ್ಳೆಪರದೆಯ ಅಂಚಿಗೆ ಸೀಸಕಡ್ಡಿಯಿಂದ ಬಳ್ಳಿ ತೆಗೆದುಕೊಡುತ್ತೇನೆ. ಅದರ ಮೇಲೆ ಕಸೂತಿಯನ್ನು ಹಾಕಿಕೊಡಬೇಕು."

"ನಿನ್ನ ಕಾಟ ಬಹಳವಾಯಿತು. ಪರದೆಗೆಲ್ಲಿಯಾದರೂ ಕಸೂತಿ

ಹಾಕುವುದುಂಟೆ ? ”

‘ ಸೊಕ್ಕಿ ಪರದೆಯಂತಹ ವಸ್ತುವನ್ನು ಸೌಂದರ್ಯಹೀನ ಕಾರಾಗಾರಕ್ಕೆಳೆಯುವುದೆ ? ’ ಮುಂತಾಗಿ ಅಮಲನು ಟೀಕೆ ಮಾಡಿದ. ಅವನು ಮತ್ತೆ ಮುಂದುವರೆದು ‘ ಈ ಪ್ರಪಂಚದಲ್ಲಿ ಸೌಂದರ್ಯವೆಂದರೆ ಏನೆಂದು ತಿಳಿಯದ ಹದಿನೈದಾಣೆ ಜನರಿದ್ದಾರೆ. ಇದು ಅವರಿಗೆ ಕೊಂಚವೂ ಗೊತ್ತಿಲ್ಲ. ಇದೇ ಅದಕ್ಕೆ ಸಾಕ್ಷಿ ’ ಎಂದ.

ಚಾರು ಅಷ್ಟರಲ್ಲಿ ಈ ಮಾತನ್ನು ಮನಸ್ಸಿನಲ್ಲೆ ಒಪ್ಪಿಕೊಂಡಳು. ತಮ್ಮಿಬ್ಬರ ಈ ಗುಪ್ತ ಸಮಿತಿ ಆ ಹದಿನೈದಾಣೆ ಜನರಿಗಿಂತ ಬೇರೆಯೇ ಇದೆಯೆಂಬುದನ್ನು ತಿಳಿದುಕೊಂಡು ಅವಳು ಆನಂದದಿಂದ “ ಸರಿ, ಹಾಗೇ ಆಗಲಿ. ಕಸೂತಿಯ ಕೆಲಸ ಮಾಡಿಕೊಡುವೆ ” ಎಂದಳು.

“ ನಾನು ಬರೆಯಲಾರೆನೆಂದು ನಿನ್ನ ತಿಳಿವಳಿಕೆಯೆ ? ” —ಅಮಲನು ಅತ್ಯಂತ ರಹಸ್ಯಪೂರ್ಣ ಭಾವದಿಂದ ಎಂದ.

“ ಹಾಗಾದರೆ ನೀನು ಏನನ್ನಾದರೂ ಖಂಡಿತ ಬರೆದಿರಬಹುದು. ನನಗೆ ತೋರಿಸುವುದಿಲ್ಲವೆ ? ” —ಚಾರು ಅತ್ಯಂತ ಉತ್ತೇಜಿತಳಾಗಿ ಕೇಳಿದಳು.

“ ಇಂದು ಬೇಡ ಅಕ್ಕ. ”

. “ ಇಲ್ಲ, ಈ ದಿನವೇ ನಾನು ನೋಡಬೇಕು. ನನ್ನಾಣೆ, ಹೋಗು, ಅದನ್ನು ತೆಗೆದುಕೊಂಡು ಬಾ. ”

ಚಾರುಲತೆಗೆ ತನ್ನ ರಚನೆಯನ್ನು ಓದಿ ಹೇಳಬೇಕೆಂಬ ತೀವ್ರ ಉತ್ಸಾಹವೇ ಅಮಲನನ್ನು ಈ ವರೆಗೆ ತಡೆದಿದ್ದಿತು. ಈ ರಚನೆ ಚಾರುವಿನ ಮನಸ್ಸಿಗೆ ಬಾರದೇ ಹೋದರೆ ಹೇಗೆ, ಅವಳು ಒಪ್ಪದಿದ್ದರೆ ಹೇಗೆ, ಮುಂತಾದ ಸಂಕೋಚವು ಅವನನ್ನು ಕಾಡಿಸುತ್ತಲಿತ್ತು.

ಇಂದು ಅಮಲನು ತನ್ನ ಬರಹವನ್ನು ತಂದ. ಅವನ ಮೋರೆ ಸ್ವಲ್ಪ ಕೆಂಪಗಾಯಿತು. ಅವನು ಉಗುಳು ನುಂಗಿ ಗಂಟಲು ಸರಿಪಡಿಸಿಕೊಂಡು ಓದತೊಡಗಿದ. ಚಾರು ಗಿಡಕ್ಕೆ ಒರಗಿಕೊಂಡು ಹುಲ್ಲಿನ ಮೇಲೆ ಕಾಲು ಚಾಚಿ ಆಲಿಸತೊಡಗಿದಳು.

‘ ನನ್ನ ಕಾಪಿ ’— ಇದು ಅದರ ತಲೆಬರೆಹ. “ ಏ ನನ್ನ ಶುಭ್ರ ಕಾಪಿ, ಕಲ್ಪನೆಗಳಿನ್ನೂ ನಿನ್ನನ್ನು ಸ್ಪರ್ಶಿಸಿಲ್ಲ. ಸೂತಿಕಾ-ಗೃಹವನ್ನು ಭಾಗ್ಯ ಪುರುಷನು ಪ್ರವೇಶಮಾಡುವ ಮುನ್ನ ಶಿಶುವಿನ ಲಲಾಟವು ನಿರ್ಮಲವಿರುವಂತೆ ನೀನಿರುವೆ.

ನೀನು ರಹಸ್ಯಮಯವಿರುವೆ. ಒಂದು ದಿನ ನಿನ್ನ ಕೊನೆಯ ಭಾಗದ ಕೊನೆಯ ಸಾಲಿನಲ್ಲಿ ಉಪಸಂಹಾರ ಬರೆಯುವೆ. ಆ ವೇಳೆ ಈಗೆಲ್ಲಿ? ನಿನ್ನ ಈ ಶುಭ್ರ ಶಿಶುಪತ್ರಗಳು ಆ ಚಿರಕಾಲಕ್ಕಾಗಿ ಮಸೀಚಿಹ್ನಿತ ಸಮಾಪ್ತವನ್ನು ಕುರಿತು ಇಂದು ಕನಸಿನಲ್ಲಿಯೂ ಯೋಚಿಸುತ್ತಿರುವುದಿಲ್ಲ"—ಮುಂತಾಗಿ ಇನ್ನೂ ಏನೇನೋ ಬರೆದಿತ್ತು.

ಮರದ ನೆರಳಿಗೆ ಕುಳಿತುಕೊಂಡು ಸುಮ್ಮನೆ ಆಲಿಸುತ್ತಿದ್ದ ಚಾರು ತುಸು ಹೊತ್ತು ಸುಮ್ಮನಿದ್ದಳು. "ನಿನಗೆ ಬರೆಯಲು ಬರುವುದಿಲ್ಲವೆ? ಏಕೆ?" ಎಂದಳು ಆ ಮೇಲೆ.

ಆ ಮರದಡಿಯಲ್ಲಿ ಅಮಲನು ಅವಳಿಗೆ ಸಾಹಿತ್ಯದ ಮಾದಕ ರಸಾಸ್ವಾದನವನ್ನು ಮಾಡಿಸಿದುದು ಇದೇ ಮೊದಲು. ಜೊತೆಗಾರಳೂ ಹೊಸಬಳು; ರಸನೆಯೂ ಹೊಸದು. ತೃತೀಯ ಪ್ರಹರದ ಸೂರ್ಯರಶ್ಮಿಯ ಛಾಯೆ ಬೀಳತೊಡಗಿದ್ದುದರಿಂದ ಅದು ರಹಸ್ಯಮಯಿಯಾಗುತ್ತ ನಡೆದಿತ್ತು.

"ಅಮಲ, ಸ್ವಲ್ಪವಾದರೂ ಅಮಟೆ ಕಾಯಿಗಳನ್ನು ಒಯ್ಯಬೇಕು. ಇಲ್ಲವಾದರೆ ಮಂದಾಕಿನಿಗೆ ಏನು ಹೇಳಲಿ?" ಚಾರು ಎಂದಳು.

ಮೂಢ ಮಂದಾಕಿನಿಗೆ ಈ ಎಲ್ಲ ಸಾಹಿತ್ಯಿಕ ಆಲೋಚನೆಗಳನ್ನು ಹೇಳುವ ಪ್ರವೃತ್ತಿಯೇ ಇರಲಿಲ್ಲ. ಆದರಿಂದ ಅಮಟೆ ಕಾಯಿಗಳನ್ನು ಕೊಯ್ದುಕೊಂಡು ಹೋಗಬೇಕಾಯಿತು.

೨

ಉಪವನದ ಸಂಕಲ್ಪವು ಅವರ ಅನೇಕ ಅನ್ಯಾನ್ಯ ಸಂಕಲ್ಪಗಳಂತೆ ಸೀಮಾಹೀನ ಕಲ್ಪನಾಕ್ಷೇತ್ರದಲ್ಲಿ ಎಂದೋ ಅದೃಶ್ಯವಾಯಿತು. ಇದು ಚಾರು ಅಮಲರಿಬ್ಬರಿಗೂ ತಿಳಿಯಲೇ ಇಲ್ಲ.

ಈಗ ಅಮಲನ ರಚನೆಗಳೇ ಅವರ ಆಲೋಚನೆಗೆ, ಪರಾಮರ್ಶೆಗೆ ಪ್ರಧಾನ ವಿಷಯವಾಯಿತು. "ಅಕ್ಕ, ಬಹಳೇ ಸುಂದರವಾದ ಭಾವವೊಂದು ಹೊಳೆದಿದೆ" —ಅಮಲನು ಬಂದು ಹೇಳುತ್ತಿದ್ದ.

"ನಡೆ, ಉಪವನದ ದಕ್ಷಿಣದಿಕ್ಕಿನತ್ತ ಹೋಗೋಣ. ಇಲ್ಲಿಗೆ ಈಗ

ಮುಂದಾ ಎಲೆ ಹಚ್ಚಲು ಬರುವಳು" —ಚಾರು ಉತ್ಸಾಹಿತಳಾಗಿ ಎದ್ದು ಹೇಳುತ್ತಿದ್ದಳು.

ಚಾರು ಒಳ ಅಂಗಳದಲ್ಲಿ ಒಂದು ಬೆತ್ತದ ಹಳೆಯ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಿದ್ದಳು. ಮತ್ತೆ ಅಮಲನು ರೇಲಿಂಗಿನ ಕೆಳಗಿರುವ ಎತ್ತರ ವಾದ ಸ್ಥಳದ ಮೇಲೆ ಕುಳಿತುಕೊಂಡು ಕಾಲುಗಳನ್ನು ಚಾಚುತ್ತಿದ್ದ.

ಅಮಲನು ಯಾವಾಗಲೂ ನಿರ್ದಿಷ್ಟ ವಿಷಯುವನ್ನು ಕುರಿತು ಬರೆಯು ತ್ತಿರಲಿಲ್ಲ—ಬರೆದುದನ್ನು ಬಿಚ್ಚಿಹೇಳುವುದು ಅವನಿಗೆ ಅಸಾಧ್ಯವೆನಿಸುತ್ತಿತ್ತು. ವಕ್ರವಕ್ರವಾಗಿ ಅವನು ಹೇಳುವುದನ್ನು ಅರ್ಥಮಾಡಿಕೊಳ್ಳಬೇಕಾದರೆ ತಿಣಿಕ ಬೇಕಾಗುತ್ತಿತ್ತು. "ಅಕ್ಕ, ನಿನಗೆ ಅರ್ಥವಾಗುವಂತೆ ಹೇಳಲು ನನಗೆ ಬಾರದು" ಎಂದು ಅಮಲನೇ ಆಗಾಗ ಹೇಳುತ್ತಿದ್ದ.

"ಇಲ್ಲ, ನನಗೆಲ್ಲ ತಿಳಿಯುತ್ತದೆ. ನೀನಿದನ್ನು ಬರೆದು ಮುಗಿಸು, ಹೊತ್ತು ಕಳೆಯಬೇಡ." ಚಾರು ಹೇಳುತ್ತಿದ್ದಳು.

ಚಾರು ಅಲ್ಪಸ್ವಲ್ಪ ಅರ್ಥವನ್ನೂ ಅಪಾರ್ಥವನ್ನೂ ಮಾಡಿಕೊಂಡು ಏನೇನನ್ನೊ ಕಲ್ಪಿಸಿಕೊಂಡು, ಅಮಲನು ವ್ಯಕ್ತಗೊಳಿಸುವ ಆವೇಗಕ್ಕೆ ಉತ್ತೇಜಿತಳಾಗುತ್ತಿದ್ದಳು; ಮನಸ್ಸಿನಲ್ಲಿ ಏನನ್ನಾದರೂ ಕಲ್ಪಿಸಿಕೊಂಡು ಅದರಿಂದಲೇ ಆನಂದಪಡುತ್ತಿದ್ದಳು; ಆಗ್ರಹದಿಂದ ಅಧೀರಳಾಗುತ್ತಿದ್ದಳು.

"ಎಷ್ಟು ಬರೆದೆ?"— ಚಾರು ಆ ದಿನದ ರಾತ್ರಿಯೇ ಅಮಲನನ್ನು ಕೇಳುತ್ತಿದ್ದಳು.

"ಇಷ್ಟು ಬೇಗನೆ ಬರೆಯುವುದಾದರೂ ಹೇಗೆ ಅಕ್ಕ?" ಅಮಲನು ಕೇಳುತ್ತಿದ್ದ.

"ಎಲ್ಲಿ ನೋಡುವಾ, ನೀನು ಅದನ್ನಿನ್ನೂ ಬರೆದು ಮುಗಿಸಲಿಲ್ಲವೆ?"— ಚಾರು ಮರುದಿನ ಬೆಳಿಗ್ಗೆ ಸ್ವಲ್ಪ ಸಿಟ್ಟಿನ ಸ್ವರದಿಂದ ಕೇಳುತ್ತಿದ್ದಳು.

"ತಡೆ, ಇನ್ನೂ ಸ್ವಲ್ಪ ಯೋಚನೆ ಮಾಡುತ್ತೇನೆ" ಎಂದ ಅಮಲ.

ಚಾರುವಿಗೆ ಸಿಟ್ಟು ಬಂದು— "ಹಾಗಾದರೆ ಇರಲಿ ಬಿಡು" ಎಂದಳು.

ಅದೇ ಸಿಟ್ಟು ಸಂಜೆಯ ವರೆಗೂ ಉಳಿದು ಹೆಚ್ಚಾಗುತ್ತ ಆಗುತ್ತ ಅವ ರಿಬ್ಬರಲ್ಲಿ ಮಾತುಕತೆಯನ್ನೇ ನಿಲ್ಲಿಸಿಬಿಡುತ್ತಿತ್ತು. ಆಗ ಕೈವಸ್ತ್ರವನ್ನು ತೆಗೆ ಯುವ ನೆವದಿಂದ ಅಮಲನು ಬೊಕ್ಕಣದೊಳಗೆ ಕೈಹಾಕಿ ಕಾಗದದ ಪುಡಿಕೆ ಯನ್ನು ಹೊರಗೆ ತೆಗೆದ.

ನಿಮಿಷ ಮಾತ್ರದಲ್ಲಿಯೇ ಚಾರುವಿನ ಮೌನವು ಭಂಗವಾಯಿತು. "ಅದೇನು, ನೀನು ಬರೆದೇ ಬಿಟ್ಟಿರುವೆ,—ನನಗೆ ಮಾತ್ರ ಸುಳ್ಳು ಹೇಳುತ್ತಿ, ತೋರಿಸಬಾರದೆ ?" ಅಮಲನನ್ನು ಅವಳು ಕೇಳಿದಳು.

"ಇನ್ನೂ ಸ್ವಲ್ಪ ಉಳಿದಿದೆ, ಪೂರ್ಣವಾಗಿಲ್ಲ. ಅದನ್ನಷ್ಟು ಬರೆದು ಆ ಮೇಲೆ ತೋರಿಸುತ್ತೇನೆ."

"ಕೂಡದು. ಈಗಲೇ ಓದಿ ಹೇಳು."

ಅಮಲನ ಮನಸ್ಸೇನೋ ಈಗಲೇ ಹೇಳಲು ಹಾತೊರೆಯುತ್ತಿತ್ತು. ಆದರೆ ಚಾರುವಿನ ಕೂಡ ತುಸು ಹೊತ್ತು ವಾದಿಸದೆ ಅವನು ಹೇಳುವವನಲ್ಲ. ಆ ವೇಲೆ ಕಾಗದವನ್ನು ಕೈಯೊಳಗೆ ತೆಗೆದುಕೊಂಡು ಪುಟಗಳನ್ನು ಹೊಂದಿಸಿ ಕೊಳ್ಳುತ್ತ ಸೀಸಕಡ್ಡಿಯಿಂದ ಒಂದೆರಡು ಸಂಶೋಧನಗಳನ್ನೂ ಮಾಡುತ್ತಿದ್ದ. ಆಗ ಚಾರು ಪುಲಕಿತ ಕುತೂಹಲದಿಂದ ನೀರಿನ ಭಾರಕ್ಕೆ ಬಾಗಿದ ಮೋಡದಂತೆ ಆ ಕಾಗದಗಳನ್ನು ನೋಡಲು ದುಂಬಾಲು ಬೀಳುತ್ತಿದ್ದಳು.

ಅಮಲನು ಮೂರು–ನಾಲ್ಕು ಪ್ಯಾರಾಗ್ರಾಫ್ ಬರೆಯಲಿ, ಎಷ್ಟೇ ಬರೆಯಲಿ, ಅದನ್ನು ಚಾರುವಿಗೆ ತೋರಿಸಬೇಕಾಗುತ್ತದೆ. ಇನ್ನು ಬರೆಯುದೆ ಬಿಟ್ಟ ಭಾಗವನ್ನು ಕುರಿತು ಆಲೋಚನೆ, ಊಹೆಗಳನ್ನು ಹಿಡಿದು ವಾದ ವಿವಾದ ನಡೆಯುತ್ತದೆ.

ಇಲ್ಲಿಯ ವರೆಗೆ ಇಬ್ಬರೂ ಆಕಾಶಕುಸುಮದ ತೋಟದಲ್ಲಿದ್ದರು. ಈಗ ಕಾವ್ಯಕುಸುಮದ ಸೃಷ್ಟಿಯಾದುದರಿಂದ ಇಬ್ಬರೂ ಮತ್ತೆ ಎಲ್ಲ ಸಂಗತಿ ಗಳನ್ನೂ ಮರೆತರು.

ಒಂದು ದಿನ ಒಂಬತ್ತು ಗಂಟೆಗೆ ಅಮಲನು ಕಾಲೇಜಿನಿಂದ ಬಂದ. ಅವನ ಜೂಕ್ಕಣ ಉಬ್ಬಿತ್ತು. ಅಮಲನು ಮನೆಯೊಳಗೆ ಕಾಲಿಡುವಾಗ ಚಾರು ಅಂತಃಪುರದ ಕಿಡಿಕಿಯಿಂದಲೇ ಅವನ ಉಬ್ಬಿದ ಬೊಕ್ಕಣವನ್ನು ನೋಡಿದ್ದಳು.

ಅಮಲನು ಕಾಲೇಜಿನಿಂದ ಮನೆಗೆ ಬಂದಾಗ ಒಳಗೆ ಹೋಗಲು ಎಂದೂ ತಡಮಾಡುತ್ತಿರಲಿಲ್ಲ. ಆದರೆ ಇಂದು ಅವನು ತನ್ನ ತುಂಬಿದ ಬೊಕ್ಕಣವನ್ನು ಹಿಡಿದುಕೊಂಡು ಹೊರಗಿನ ಕೋಣೆಯಲ್ಲೇ ಉಳಿದ. ಬೇಗನೆ ಒಳಗೆ ಹೋಗಲೇ ಇಲ್ಲ.

ಚಾರು ಅಂತಃಪುರದ ಬಾಗಿಲಿಗೆ ಬಂದು ನಿಂತು ಎಷ್ಟೋ ಸಲ ಚಪ್ಪಾಳೆ ತಟ್ಟಿದಳು. ಆದರೆ ಅದನ್ನು ಯಾರೂ ಗಮನಿಸಲೇ ಇಲ್ಲ. ಚಾರು ಸಿಟ್ಟಿ

ನಿಂದ ಒಳ ಅಂಗಳದಲ್ಲಿ ಹೋಗಿ ಕುಳಿತುಕೊಂಡು ಮನ್ಮಥದತ್ತನು ಬರೆದ ಒಂದು ಪುಸ್ತಕವನ್ನು ಹಿಡಿದು ಓದಲು ತೊಡಗಿದಳು.

ಮನ್ಮಥದತ್ತನು ಹೊಸ ಲೇಖಕ. ಅವನ ಲೇಖನಶೈಲಿ ಬಹುತರವಾಗಿ ಅಮಲನ ಶೈಲಿಯನ್ನೇ ಹೋಲುತ್ತದೆ. ಅದರಿಂದ ಅಮಲನು ಅವನನ್ನು ಎಂದೂ ಹೊಗಳುವುದಿಲ್ಲ. ಒಮ್ಮೊಮ್ಮೆ ಚಾರುವಿನ ಮುಂದೆ ಆತನ ರಚನೆಯನ್ನು ವಿಕೃತವಾಗಿ ಉಚ್ಚರಿಸಿ ಹಾಸ್ಯಮಾಡುತ್ತಿದ್ದ. ಚಾರು ಅಮಲನ ಕೈಯೊಳಗಿನ ಆ ಪುಸ್ತಕವನ್ನು ತೆಗೆದುಕೊಂಡು ತಿರಸ್ಕಾರದಿಂದ ಒಗೆದುಬಿಡುತ್ತಿದ್ದಳು.

ಇಂದು ಅವಳು ಅವನ ಕಾಲಸಪ್ಪಳವನ್ನು ಕೇಳಿದಳು. ಆಗ ಅದೇ ಮನ್ಮಥದತ್ತನು ಬರೆದ 'ಕಲಕಂಠ' ಪುಸ್ತಕವನ್ನು ಮೋರೆಗೆ ಹಿಡಿದುಕೊಂಡು ಅತ್ಯಂತ ಏಕಾಗ್ರಚಿತ್ತದಿಂದ ಓದತೊಡಗಿದಳು.

ಅಮಲನು ಒಳ ಅಂಗಳದಲ್ಲಿ ಹೆಜ್ಜೆ ಇಟ್ಟ. ಚಾರು ಅವನ ಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ. "ಅಕ್ಕ, ಏನು ಓದುತ್ತಿ?"—ಅವನು ಕೇಳಿದ.

ಚಾರು ಸುಮ್ಮನಿದ್ದಳು. ಅಮಲನು ಚೌಕಿಯ ಹಿಂದೆ ಬಂದು ನಿಂತು ಪುಸ್ತಕವನ್ನು ನೋಡಿದ. "ಮನ್ಮಥದತ್ತನ 'ಗಲಗಂಡ'ವೇನು?" ಎಂದ.

"ಉಶ್, ಕಾಡಿಸಬೇಡ, ನನಗೆ ಓದಗೊಡು" ಎಂದಳು ಚಾರು.

ಅಮಲನು ಅವಳ ಬೆನ್ನಿನ ಬಳಿ ನಿಂತುಕೊಂಡೇ ವ್ಯಂಗ್ಯ ಸ್ವರದಿಂದ ಓದತೊಡಗಿದ— "ನಾನು ತೃಣ, ಕ್ಷುದ್ರ ತೃಣ. ರಕ್ತಾಂಬರ ರಾಜವೇಷಧಾರಿ ಅಶೋಕನೇ, ನಾನು ಕ್ಷುದ್ರ ತೃಣ ಮಾತ್ರ ಇದ್ದೇನೆ. ನಾನು ಹೂ ಬಿಟ್ಟಿಲ್ಲ. ನನ್ನ ನೆರಳೆಂಬುದು ಇಲ್ಲ. ನಾನು ತಲೆಯೆತ್ತಿ ನಾಲ್ವರಂತೆ ನಿಲ್ಲಲಾರೆ. ವಸಂತ ಋತುವಿನ ಕೋಗಿಲೆ ನನ್ನನ್ನಾಶ್ರಯಿಸಿ 'ಕುಹೂ ಕುಹೂ' ಎಂದು ದನಿಗೈಯುತ್ತ ಜಗತ್ತನ್ನು ಉನ್ಮತ್ತಗೊಳಿಸಲಾರದು—ಅದರೂ ಅಶೋಕವೇ, ನಿನ್ನ ಆ ಪುಷ್ಪಿತ ಶಾಖೆಯಿಂದ ನನ್ನನ್ನು ಉಪೇಕ್ಷಿಸಬೇಡ. ನಿನಗೆ ಶರಣು ಬಂದಿದ್ದೇನೆ. ನಾನು ತೃಣ, ಆದರೂ ನನ್ನನ್ನು ಕಡೆಗಣಿಸಬೇಡ."

ಅಮಲನು ಈ ಭಾಗವನ್ನು ಓದಿ ಆ ಮೇಲೆ ತನ್ನ ಕಡೆಗೆ ಮೋರೆ ಮಾಡಿಕೊಂಡು ಮತ್ತೊಮ್ಮೆ ಅದೇ ವ್ಯಂಗ ಧ್ವನಿಯಿಂದ ಹಾಗೆಯೇ ಮುಂದೆ ಸಾಗಿದ—'ನಾನು ಬಾಳೆಯ ಗೊನೆ. ಏ ಕುಂಬಳಕಾಯಿ, ಮನೆ ಗುಡಿಸಲುಗಳ ಮೇಲೆ ಬಾಳುವ ಕುಂಬಳಕಾಯಿ, ನನ್ನನ್ನು ನೋಡು!'

ಚಾರುವಿಗೆ ಕುತೂಹಲ ಹೆಚ್ಚಿತು, ಸಿಟ್ಟು ಬರಲಿಲ್ಲ. ಅವಳು ನಗುತ್ತ ಎದ್ದು ಕುಳಿತಳು. ಆ ಮೇಲೆ ಪುಸ್ತಕವನ್ನು ಎಸೆದು—"ನೀನು ಬಹಳ ದೊಡ್ಡವನು. ನಿನ್ನ ಬರಹವನ್ನುಳಿದು ಬೇರೆಯವರು ಬರೆದುದನ್ನು ಓದಗೊಡು ಪುದೇ ಇಲ್ಲ" ಎಂದಳು.

"ನೀನು ಬಹಳ ವಿಶಾಲ ಮನಸ್ಸಿನವಳು. ಹುಲ್ಲು ಸಿಕ್ಕರೂ ಆ ಕೂಡಲೇ ನುಂಗಬೇಕೆನ್ನುತ್ತಿ !" ಎಂದ ಅಮಲ.

"ಮಹಾರಾಯಾ, ಹುಡುಗಾಟಿಕೆ ಸಾಕು. ಬೊಕ್ಕಣದಲ್ಲೇನಿದೆ, ಬೇಗ ತೆಗೆ!"

"ನಿನ್ನ ಬುದ್ಧಿ ಏನಿರಬಹುದೆಂದು ಹೇಳುತ್ತದೆ?"

ಚಾರುವನ್ನು ಬಹಳ ಹೊತ್ತು ಕಾಡಿಸಿ ಅಮಲನು ಕೊನೆಗೆ ಬೊಕ್ಕಣ ದಿಂದ 'ಸರೋರುಹ' ಎಂಬ ವಿಖ್ಯಾತ ಮಾಸಪತ್ರವೊಂದನ್ನು ತೆಗೆದ.

ಆ ಪತ್ರಿಕೆಯಲ್ಲಿ ಅಮಲನ 'ನನ್ನಕಾಪಿ' ಎಂಬ ಆ ಲೇಖವು ಪ್ರಕಟ ವಾಗಿದೆ !

ಅದನ್ನು ನೋಡಿ ಚಾರು ಸುಮ್ಮನಾದಳು. ಅಕ್ಕನಿಗೆ ಬಹಳ ಸಂತೋಷ ವಾಗುವುದೆಂದು ಅಮಲನೆಣಿಸಿದ್ದ. ಆದರೆ ಅದರ ವಿಶೇಷ ಲಕ್ಷಣವೇನೂ ಕಾಣಲಿಲ್ಲ. ಆಗ ಅವನು "'ಸರೋರುಹ'ದಲ್ಲಿ ಮುಂದಿಯು ಲೇಖಗಳು ಪ್ರಕಟವಾಗುವುದಿಲ್ಲ !" ಎಂದ.

ಅಮಲನ ಈ ಮಾತು ಕೈಗಂಟಿನದು. ನಿಜವಾದ ಮಾತೆಂದರೆ, ಉತ್ತಮ ಲೇಖವು ಕೈಸೇರಿದರೆ ಸಂಪಾದಕರು ಅದನ್ನು ಬಿಡುವುದಿಲ್ಲ. ಆದರೆ ಅವನು ಚಾರುಲತೆಗೆ "ಸಂಪಾದಕರು ಬಹಳ ನಿಷ್ಠುರರಿರುತ್ತಾರೆ; ನೂರಾರು ಬರಹ ಗಳಲ್ಲಿ ಒಂದನ್ನು ಮಾತ್ರ ಆಯ್ದುಕೊಳ್ಳುತ್ತಾರೆ" ಎಂದು ಹೇಳಿದ.

ಅಮಲನ ಈ ಮಾತು ಕೇಳಿ ಪ್ರಸನ್ನತೆಯನ್ನು ತಂದುಕೊಳ್ಳಲೆತ್ನಿಸಿದಳು ಚಾರು. ಆದರೆ ಅವಳ ಮನಸ್ಸಿಗೆ ಮಾತ್ರ ನೆಮ್ಮದಿಯೆನಿಸಲಿಲ್ಲ. ತನ್ನ ಮನಸ್ಸಿಗೆ ವ್ಯಥೆ ಏಕಾಯಿತೆಂಬುದನ್ನು ತಿಳಿದುಕೊಳ್ಳಲು ಅವಳು ಪ್ರಯತ್ನಿ ಸಿದಳು. ಆದರೆ ಸಂಗತವಾದ ಯಾವ ಕಾರಣವೂ ಹೊರಡಲಿಲ್ಲ.

ಅಮಲನ ರಚನೆಯು, ಅಮಲ ಚಾರುಲತೆಯರಿಬ್ಬರ ಸಂಪತ್ತೂ ಆಗಿತ್ತು. ಇಲ್ಲಿ ಅಮಲನು ಲೇಖಕ, ಚಾರು ವಾಚಕಳು. ಆ ಲೇಖನಗಳಲ್ಲಿ ಉಚ್ಚ ಮಟ್ಟದ ರಸವು ಉಕ್ಕುತ್ತದೆ. ಅವನ್ನು ಎಲ್ಲರೂ ಓದುವರು, ಪ್ರಶಂಸಿಸುವರು.

ಇದನ್ನು ನೆನೆಸಿಕೊಂಡರೆ ತನಗೆ ಏಕೆ ವಿಷಾದವೆನಿಸುವುದೆಂಬುದನ್ನು ಚಾರು ತಿಳಿದುಕೊಳ್ಳಲಾರದೆ ಹೋದಳು.

ವಾಚಕರ ಸಂಖ್ಯೆ ಹೆಚ್ಚಿದ್ದರೆ ಲೇಖಕನ ಆಕಾಂಕ್ಷೆ ಬೇಗನೆ ಕುಗ್ಗುವುದು. ಅಮಲನು ತನ್ನ ರಚನೆಗಳನ್ನು ಮುದ್ರಿಸತೊಡಗಿದ, ಪ್ರಶಂಸೆಯನ್ನೂ ಪಡೆದ.

ನಡುನಡುವೆ ಭಕ್ತರ ಕಾಗದಗಳೂ ಬರತೊಡಗಿದವು. ಅಮಲನು ಅವನ್ನು ತನ್ನ ಅಕ್ಕನಿಗೆ ತೋರಿಸುತ್ತಿದ್ದ. ಅದಕ್ಕೆ ಚಾರು ವಿಷಾದವನ್ನೂ, ಆನಂದವನ್ನೂ ವ್ಯಕ್ತಪಡಿಸುತ್ತಿದ್ದಳು. ಅಮಲನ ಲೇಖನಗಳಿಗೆ ಇನ್ನು ಚಾರುವಿನ ಉತ್ಸಾಹ, ಉತ್ತೇಜನಗಳ ಅವಶ್ಯಕತೆ ಇಲ್ಲ. ಅಮಲನಿಗೆ ಆಗಾಗ ರಮಣಿಯರ ಹೆಸರು ಹಸ್ತಾಕ್ಷರಗಳಿಲ್ಲದ ಪತ್ರಗಳೂ ಬರತೊಡಗಿದವು. ಚಾರುವಿಗೆ ಇದು ಗೊತ್ತಾದಾಗ ಹುಡುಗಾಟಿಕೆ ಮಾಡುತ್ತಿದ್ದಳು. ಆದರೆ ಅದ ರಿಂದ ಅವಳ ಮನಸ್ಸೇನೂ ನೊಂದುಕೊಳ್ಳುತ್ತಿರಲಿಲ್ಲ. ಅವರ ಕಮಿಟಿಯು ಮುಚ್ಚಿದ ಬಾಗಿಲನ್ನು ಒಮ್ಮೆಲೆ ತೆರೆದು ದೇಶದ ಪಾಠಕ-ಮಂಡಳಿ ಅವರಿಬ್ಬರ ಮಧ್ಯದಲ್ಲಿ ಬಂದು ನಿಂತಿತು!

"ಚಾರು ನೋಡು, ನಮ್ಮ ಅಮಲ ಇಷ್ಟು ಚನ್ನಾಗಿ ಬರೆಯುತ್ತಾನೆ, ನನಗಿದು ಗೊತ್ತೇ ಇರಲಿಲ್ಲ!" ಭೂಪತಿ ಒಮ್ಮೆ ಅವಕಾಶ ಸಿಕ್ಕಾಗ ಎಂದರು.

ಭೂಪತಿಯ ಪ್ರಶಸ್ತಿಪತ್ರವನ್ನು ನೋಡಿ ಚಾರು ಪ್ರಸನ್ನಳಾದಳು. ಭೂಪತಿ ಅಮಲನಿಗೆ ಆಸರೆ ಕೊಟ್ಟಿದ್ದಾರೆ, ಆದರೆ ಇದರಲ್ಲಿ ಅನ್ಯ ಆಶ್ರಿತರಿಗಿಂತ ಹೆಚ್ಚು ಸಾರ್ಥಕ್ಯವಿದೆ. ಅಮಲನ ಯೋಗ್ಯತೆ ಪತಿದೇವರಿಗೆ ತಿಳಿದುಬಂದಾಗ ಚಾರುವಿಗೆ ಅಭಿಮಾನವೆನಿಸಿತು. "ಅಮಲನನ್ನು ನಾನು ಇಷ್ಟು ಸ್ನೇಹ, ಆದರಗಳಿಂದ ಏಕೆ ಕಾಣುತ್ತೇನೆ? ನೀವು ಅಮಲನನ್ನು ಇಷ್ಟು ದಿನಗಳ ಮೇಲೆ ಗುರುತಿಸಿದ್ದೀರಿ. ನಾನು ಅವನ ಯೋಗ್ಯತೆಯನ್ನು ಬಹಳ ದಿನಗಳ ಹಿಂದೆಯೇ ಕಂಡುಹಿಡಿದಿದ್ದೇನೆ. ಅವನು ಯಾರ ಅವಜ್ಞೆಗೂ ಗುರಿಯಾಗ ಲಾರ" ಎಂಬುದು ಚಾರುವಿನ ಮನಸ್ಸಿನ ಭಾವವಾಗಿದ್ದಿತು.

"ನೀವು ಅವನ ಲೇಖಗಳನ್ನು ಓದಿದ್ದೀರಾ?"—ಕೇಳಿದಳು ಚಾರು.

"ಹೂಂ— ಇಲ್ಲ, ಮನಸ್ಸುಕೊಟ್ಟು ಓದಿಲ್ಲ. ಅದಕ್ಕೆ ಬಿಡುವೇ ಸಿಗುವು ದಿಲ್ಲ. ಆದರೆ ನಮ್ಮ ನಿಶಿಕಾಂತನು ಓದಿ ಬಹಳ ಹೊಗಳುತ್ತಿದ್ದ. ಅವನು ಬರಹಗಳನ್ನು ಚನ್ನಾಗಿ ತಿಳಿದುಕೊಳ್ಳುತ್ತಾನೆ" ಎಂದರು ಭೂಪತಿರಾಯರು.

ಅಮಲನನ್ನು ಕುರಿತು ಗೌರವ ಹೆಚ್ಚಲೆಂದು ಚಾರು ಹಾರೈಸುತ್ತಿದ್ದಳು.

೩

ಉಮಾಪತಿ ಭೂಪತಿರಾಯರಿಗೆ ವರ್ತಮಾನ ಪತ್ರಿಕೆಯ ಜೊತೆಗೇ ಮತ್ತೆ ಐದು ಉಪಹಾರಗಳನ್ನು ಕೊಡಬೇಕೆಂದು ಭಾವಿಸಿದ್ದರು. ಉಪಹಾರದಿಂದ ಪಾರಾಗಿ, ಆಗುವ ಹಾನಿಯನ್ನು ಹೇಗೆ ನಿವಾರಿಸಿಕೊಳ್ಳುವುದು ಮುಂತಾಗಿ ರಾಯರು ಯೋಚನೆಗೆ ಗುರಿಯಾಗಿದ್ದರು. ಆದರೂ ಅವರಿಗೆ ಹೊಳೆಯಲಿಲ್ಲ.

ಒಮ್ಮೆ ಚಾರು ಕೋಣೆಯೊಳಗೆ ಕಾಲಿಟ್ಟಳು. ಅಲ್ಲಿ ರಾಯರನ್ನು ನೋಡಿ ಹಿಂತಿರುಗಿದಳು. ಸ್ವಲ್ಪ ಹೊತ್ತು ಬಿಟ್ಟು ಮತ್ತೆ ಬಂದಳು. ಬಂದು ನೋಡುವಾಗ ಇಬ್ಬರೂ ಲೆಕ್ಕವನ್ನು ಮುಂದಿಟ್ಟುಕೊಂಡು ವಾದ-ವಿವಾದ ಮಾಡುತ್ತಿದ್ದಾರೆ.

ಚಾರು ಸಂಕೋಚಪಡುತ್ತಿದ್ದುದನ್ನು ನೋಡಿ ಉಮಾಪತಿ ಏನೋ ನೆವ ಮುಂದೆ ಮಾಡಿಕೊಂಡು ಹೊರಗೆ ಹೋದರು. ಇತ್ತ ರಾಯರು ಲೆಕ್ಕಕ್ಕಾಗಿ ತಲೆ ತುರಿಸಿಕೊಳ್ಳತೊಡಗಿದರು.

"ಇನ್ನೂ ನಿಮ್ಮ ಕೆಲಸ ಮುಗಿದಿಲ್ಲವೆಂದು ಕಾಣುತ್ತದೆ? ಆ ಪತ್ರಿಕೆಗಾಗಿ ಹಗಲಿರುಳು ತಲೆಕೆಡಿಸಿಕೊಳ್ಳುತ್ತೀರಿ. ನಿಮಗೆ ಹೊತ್ತಾದರೂ ಹೇಗೆ ಹೋಗುತ್ತದೆ ನನಗಂತೂ ತಿಳಿಯದಾಗಿದೆ!" — ಕೋಣೆಯನ್ನು ಹೊಕ್ಕು ಹೇಳಿದಳು ಚಾರು.

ಭೂಪತಿ ಲೆಕ್ಕನನ್ನು ಸರಿಸಿ ಬದಿಗಿಟ್ಟು ಮುಗುಳು ನಗುತ್ತ ಮನಸ್ಸಿನಲ್ಲೇ ಧ್ಯಾನಿಸತೊಡಗಿದರು. ಚಾರುವಿನ ಕಡೆ ಗಮನ ಕೊಡಲು ನನಗೆ ಬಿಡುವೇ ಸಿಗುವುದಿಲ್ಲ. ಇದು ದೊಡ್ಡ ಅನ್ಯಾಯವೇ ಸರಿ. ಪಾಪ, ಅವಳು ಹೊತ್ತನ್ನು ಹೇಗೆ ಕಳೆಯಬೇಕು? ಯಾವ ಹಾದಿಯಿದೆ ಅವಳಿಗೆ?

"ಇಂದು ನೀನು ಓದುವುದಿಲ್ಲವೆ? ಮೇಷ್ಟ್ರು ಓಡಿಹೋದಂತೆ ತೋರುತ್ತದೆ? ನಿಮ್ಮ ಸಾಲೆಯಲ್ಲಿ ಎಲ್ಲ ನಿಯಮಗಳೂ ವಿರುದ್ಧ ನಡೆಯುತ್ತಿವೆ. ವಿದ್ಯಾರ್ಥಿನಿ ಹೊತ್ತಿಗೆಯನ್ನು ಹಿಡಿದುಕೊಂಡು ನಿಂತಿದ್ದಾಳೆ. ಆದರೆ ಮೇಷ್ಟ್ರು ಸುಳಿವೇ ಇಲ್ಲ! ಇತ್ತೀಚೆ ಅಮಲನು ನಿನಗೆ ನಿಯಮಿತವಾಗಿ ಹೇಳಿ ಕೊಡುವಂತೆ ಕಾಣುವುದಿಲ್ಲ" —ಅವರು ಸ್ನೇಹಯುಕ್ತ ಸ್ವರದಲ್ಲಿ ಎಂದರು.

"ನನಗೆ ಹೇಳಿಕೊಡುವುದಕ್ಕಾಗಿ ಅಮಲನ ವೇಳೆ ವ್ಯರ್ಥವಾಗಿ ನಷ್ಟವಾಗುತ್ತಿದೆ. ಇದು ಸರಿಯಲ್ಲ. ನೀವು ಅಮಲನನ್ನು ಒಬ್ಬ ಪ್ರೈವೆಟ್

ಟ್ಯೂಟರ್ ಎಂದು ತಿಳಿದುಕೊಂಡಿರಾ ? ” ಎಂದಳು ಚಾರು.

“ ಇದೇನು ಸಾಮಾನ್ಯ ಪ್ರೈವೆಟ್ ಡ್ಯೂಟಿಯೆ? ನಿನ್ನಂತಹ ಅಕ್ಕನಿಗೆ ಓದು ಹೇಳುವ ಸುಸಂದರ್ಭ ನನಗೆ ಸಿಕ್ಕಿದ್ದರೆ ಏನು ಹೇಳಲಿ—” ಭೂಪತಿ ಚಾರುವಿನ ನಡು ಹಿಡಿದು ತನ್ನ ಕಡೆಗೆ ಎಳೆದುಕೊಳ್ಳುತ್ತ ಎಂದರು.

“ ಓಹೋ– ಹೊ, ಸಾಕು ಸುಮ್ಮನಿರಿ. ಮುಂದೆ ಮಾತನಾಡಬೇಡಿ. ಗಂಡನಾಗಿಯೂ ಹೀಗೆ ಮಾಡುತ್ತೀರೆಂದ ಮೇಲೆ ಕೇಳಬೇಕೆ ? ”

“ ಒಳ್ಳೇದು, ನಾಳೆಯಿಂದ ನಿನಗೆ ನಾನೇ ಹೇಳಿಕೊಡುತ್ತೇನೆ. ನಿನ್ನ ಪುಸ್ತಕಗಳನ್ನು ಇಲ್ಲಿ ತಾ. ಓದಲು ಬರುತ್ತದೆಯೆ, ಓದು ನೋಡುವಾ ? ” ಭೂಪತಿ ಸ್ವಲ್ಪ ಆಹತರಾಗಿ ಎಂದರು.

“ ಸಾಕು, ಬಹಳವಾಯಿತು. ನೀವೇನೂ ಓದಿಸಬೇಕಾದುದಿಲ್ಲ. ಕೊಂಚ ಹೊತ್ತು ನಿಮ್ಮ ವರ್ತಮಾನ ಪತ್ರಿಕೆಯ ಲೆಕ್ಕವನ್ನು ಬದಿಗಿಡುವಿರಾ ? ನೀವು ಅದನ್ನು ಬಿಟ್ಟು ಮತ್ತೆ ಬೇರೆ ಯಾವುದನ್ನಾದರೂ ಕುರಿತು ಗಮನ ಕೊಡ ಬಲ್ಲಿರಾ, ಹೇಳಿ ನೋಡುವಾ ? ”—ಚಾರು ಕೇಳಿದಳು.

“ ಓಹೋ ! ಈಗ ನೀನು ನನ್ನ ಮನಸ್ಸನ್ನು ಬೇಕಾದತ್ತ ತಿರುಗಿಸಬಲ್ಲೆ ” ಎಂದರು ರಾಯರು.

“ ಸರಿ ಹಾಗಾದರೆ. ಅಮಲನ ಈ ಬರಹವನ್ನು ಓದಿ ನೋಡಿ, ಎಷ್ಟು ಚನ್ನಾಗಿ ಬರೆದಿದ್ದಾನೆ ! ನವಗೋಪಾಲ ಬಾಬುಗಳು ಇದನ್ನೋದಿ ಭಾರತದ ‘ರಸ್ಕಿನ್’ ಎಂದು ಹೆಸರಿಟ್ಟಿದ್ದಾರೆಂದು ಸಂಪಾದಕರು ಅಮಲನಿಗೆ ಬರೆದಿದ್ದಾರೆ.”

ರಾಯರು ಸ್ವಲ್ಪ ಸಂಕೋಚಭಾವದಿಂದ ಪತ್ರಿಕೆಯನ್ನು ಕೈಯಲ್ಲಿ ತೆಗೆದು ಕೊಂಡು ತೆರೆದು ನೋಡಿದರು. ಆ ಲೇಖದ ತಲೆಬರೆಹ ‘ಆಷಾಢದ ಚಂದ್ರ.’ ಕಳೆದ ಎರಡು ವಾರಗಳಿಂದ ಭೂಪತಿ ಭಾರತ ಸರಕಾರದ ಬಜೆಟ್ ಕುರಿತು ವಿಮರ್ಶಿಸಲು ವಿಷಯ ಸಂಗ್ರಹ ನಡೆಸಿದ್ದರು. ಆದರ ವಿಷಯಗಳೆಲ್ಲ ಹಲವು ಕಾಲಿನ ಹುಳುಗಳಂತೆ ಅವರ ಮೆದುಳಿನಲ್ಲಿ ಸುಳಿದಾಡುತ್ತಿದ್ದವು. ಇಂತಹ ಹೊತ್ತಿನಲ್ಲಿ ಕನ್ನಡದಲ್ಲಿ ಬರೆದ ‘ ಆಷಾಢದ ಚಂದ್ರ ’ ವನ್ನು ಆದ್ಯೋಪಾಂತ ವಾಗಿ ಓದಲು ಅವರ ಮನಸ್ಸು ಅಣಿಯಾಗಿರಲಿಲ್ಲ. ಮತ್ತೆ ಬರೆಹವೂ ಚಿಕ್ಕದಿರಲಿಲ್ಲ. ಅದು ಹೀಗೆ ಆರಂಭವಾಗಿತ್ತು—“ ಆಷಾಢಮಾಸದ ಚಂದ್ರನು ಇಂದು ಇರುಳೆಲ್ಲ ಮೋಡಗಳ ಮರೆಯಲ್ಲಿ ಏಕೆ ತಿರುಗಾಡುತ್ತಿದ್ದಾನೆ ? ತನ್ನ ಕಲಂಕವನ್ನು ಹೋಗಲಾಡಿಸಿಕೊಳ್ಳಲು ಅವನಿಗೆ ಎಲ್ಲಿಯೂ ಇಂಬು ದೊರೆತಿಲ್ಲ.

ಸ್ವರ್ಗಲೋಕದಿಂದ ಏನನ್ನೋ ಕದ್ದು ತಂದಂತೆ ಇದ್ದಾನೆ ಅವನು. ಫಾಲ್ಗುಣ ಮಾಸದಲ್ಲಿ ಆಕಾಶದಲ್ಲಿ ಮೋಡಗಳೇ ಇರಲಿಲ್ಲ. ಆಗಸವು ನಿಚ್ಚಳವಾಗಿತ್ತು. ಆಗ ಅವನು ನಿರ್ಲಜ್ಜನಂತೆ ತೆರೆದ ಆಗಸದಲ್ಲಿ ಮೆರೆಯುತ್ತಿದ್ದ. ಇಂದು ಪಸರಿಸಿದ್ದ ಆವನ ನಗೆ—ಮಗುವಿನ ಕನಸಿನಂತೆ, ಪ್ರಿಯತಮನ ಸ್ಮೃತಿಯಂತೆ, ಸುರೇಶ್ವರೀ ಶಚಿಯ ಅಲಕವಿಲಂಬಿತ ಮುಕ್ತಾಹಾರದಂತೆ—"

"ಚನ್ನಾಗಿ ಬರೆದಿದ್ದಾನೆ! ಆದರೆ ನಾನು ಇದನ್ನೆಲ್ಲ ತೆಗೆದುಕೊಂಡು ಏನು ಮಾಡಲಿ! ಈ ಕವಿತ್ವವನ್ನು ನಾನು ತಿಳಿದುಕೊಳ್ಳಬಲ್ಲೆನೆ?"—ತಲೆ ದೂಗುತ್ತ ರಾಯರು ಎಂದರು.

ಚಾರು ಸಂಕುಚಿತಳಾಗಿ ರಾಯರ ಕೈಯಲ್ಲಿದ್ದ ಪತ್ರಿಕೆಯನ್ನು ಕಸಿದು ಕೊಳ್ಳುತ್ತ "ಹಾಗಾದರೆ ನಿಮಗೇನು ಬರುತ್ತದೆ?" ಎಂದಳು.

"ನಾನು ಈ ಜಗತ್ತಿನ ಮನುಷ್ಯ;—ಮನುಷ್ಯನನ್ನು ಬಲ್ಲೆ"- ಭೂಪತಿ ಎಂದರು.

"ಮನುಷ್ಯನನ್ನು ಕುರಿತ ಸಾಹಿತ್ಯ ಇರಲೇಬಾರದೆ?"

"ಮನುಷ್ಯನು ಕಣ್ಣೆದುರಿಗೇ ಇರುತ್ತಾನೆ. ಎಂದ ಮೇಲೆ ಕೃತ್ರಿಮ ಮಾತುಗಳಿಂದ ಆತನನ್ನು ಬಣ್ಣಿಸುವ ಅವಶ್ಯಕತೆ ಏನಿದೆ?"

'. . . . .'

"ನಾನು ನಿನ್ನನ್ನು ಚನ್ನಾಗಿ ಬಲ್ಲೆ. ಎಂದಮೇಲೆ, 'ಮೇಘನಾದ—ವಧ' 'ಕವಿ–ಕಂಕಣ' ಹಾಗೂ 'ಚಂಡೀದಾಸ' ಇವನ್ನು ಆದ್ಯೋಪಾಂತವಾಗಿ ಓದಲೇಬೇಕೆ?" ಮತ್ತೆ ರಾಯರು ಚಾರುವಿನ ಗದ್ದವನ್ನು ಹಿಡಿದು ಎಂದರು.

ತಮಗೆ ಕಾವ್ಯ ತಿಳಿಯುವುದಿಲ್ಲವೆಂದು ಭೂಪತಿರಾಯರು ಹೆಮ್ಮೆ ಪಡು ತ್ತಿದ್ದರು. ಆದರೆ ಅಮಲನ ಲೇಖಗಳನ್ನೋದದಿದ್ದರೂ ಶ್ರದ್ಧಾಭಾವವು ಉದಯಿಸಿತು. ಭೂಪತಿ ಮನಸ್ಸಿನೊಳಗೇ ಎಂದುಕೊಳ್ಳುತ್ತಿದ್ದರು,— ಉಪ್ಪು ಕಾರ ಹಚ್ಚಿ ಹೊಗಳುವುದು ನನ್ನಿಂದಾಗದ ಮಾತು. ಅಮಲನಲ್ಲಿ ಇಷ್ಟು ಶಕ್ತಿ ಮನೆಮಾಡಿಕೊಂಡಿದೆಯೆಂದು ಯಾರಿಗೆ ತಾನೆ ತಿಳಿದಿತ್ತು?

ಭೂಪತಿ ತಮ್ಮಲ್ಲಿ ರಸಜ್ಞತೆ ಇರುವುದನ್ನು ಒಪ್ಪುತ್ತಿರಲಿಲ್ಲ. ಆದರೆ ಸಾಹಿತ್ಯವನ್ನು ಕುರಿತು ಅವರು ಕೃಪಣತನ ಮಾಡುತ್ತಿರಲಿಲ್ಲ. ಬಡ ಲೇಖಕ ನೊಬ್ಬನು ಬಂದು ಪುಸ್ತಕಗಳನ್ನು ಮುದ್ರಿಸಲು ನೆರವು ಕೇಳಿದರೆ ಅವರು ಕೂಡಲೇ ಉದಾರತನದಿಂದ ತಕ್ಕ ಸಹಾಯ ಮಾಡಿ ಕಳುಹುತ್ತಿದ್ದರು.

ಆದರೆ 'ನನಗೆ ಸಮರ್ಪಣ ಮಾಡುವುದು ಬೇಡ' ಎಂದು ಮಾತ್ರ ಹೇಳು ತ್ತಿದ್ದರು. ಕನ್ನಡದಲ್ಲಿ ಹೊರಡುವ ಚಿಕ್ಕ ದೊಡ್ಡ ಎಲ್ಲ ಸಾಪ್ತಾಹಿಕ, ಮಾಸಿಕ ಪತ್ರಗಳನ್ನೂ, ಪ್ರಸಿದ್ಧ ಅಪ್ರಸಿದ್ಧ, ಓದಲು ತಕ್ಕುದಾದ ತಕ್ಕುದಲ್ಲದ, ಎಲ್ಲ ಬಗೆಯ ಪುಸ್ತಕಗಳನ್ನೂ ಅವರು ಕೊಳ್ಳುತ್ತಿದ್ದರು. "ಒಂದನ್ನೂ ಓದುವುದಿಲ್ಲ, ಕೊಳ್ಳದೆ ಬಿಟ್ಟರೆ ಪಾಪ ಬರುತ್ತದೆ. ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ" ಎನ್ನುತ್ತಿದ್ದರು. ಅವರು ಓದುತ್ತಿರಲಿಲ್ಲ; ಆದ್ದರಿಂದಲೇ ಅಶ್ಲೀಲ ಪುಸ್ತಕಗಳನ್ನು ಕೊಂಚವೂ ಜರೆಯುತ್ತಿರಲಿಲ್ಲ. ಅಂತೂ ಅವರ ಭಂಡಾರವು ಕನ್ನಡ ಪುಸ್ತಕಗಳಿಂದ ತುಂಬಿತ್ತು.

ಅಮಲನು ಇಂಗ್ಲಿಷ್ ಪ್ರೂಫ್ ನೋಡಲು ನೆರವಾಗುತ್ತಿದ್ದ. ಒಮ್ಮೆ ಯಾವುದೋ ಒಂದು ತಿಳಿಯದ ಕಾಪಿಯನ್ನು ಹಿಡಿದುಕೊಂಡು ಆತನು ಕೋಣೆಗೆ ಬಂದ.

"ಅಮಲ, ನೀನು 'ಆಷಾಢದ ಚಂದ್ರ'ನನ್ನು ಕುರಿತು ಭಾದ್ರಪದ ಮಾಸದಲ್ಲಿ ಒಣಗಿದ ತಾಳೆ ಓಲೆಯ ಮೇಲೆ ಬೇಕಾದಷ್ಟು ಬರೆ, ನಾನು ಬೇಡ ವೆನ್ನುವುದಿಲ್ಲ. ಆದರೆ ಯಾರ ಮಾತಿಗೂ ಮಧ್ಯ ಬರದಿರುವ ನನ್ನ ನಡುವೆ ಬರುವುದೇಕೆ? ನೀನು ಬರೆದುದನ್ನು ಓದಿಸದೆ ನಿಮ್ಮ ಅಕ್ಕ ನನ್ನನ್ನು ಬಿಡುವು ದಿಲ್ಲ. ಇದೇನು ಫಜೀತಿ?"—ನಗುತ್ತ ರಾಯರೆಂದರು.

"ಅಕ್ಕ, ಹೀಗೇಕೆ? ನನ್ನ ಲೇಖನಗಳ ನೆವವನ್ನೊಡ್ಡಿ ಅವರಿಗೆ ಕಾಡಿಸು ವುದೇಕೆ? ಇದು ನನಗೆ ಮೊದಲೇ ತಿಳಿದಿದ್ದರೆ ನಾನು ಲೇಖನಗಳನ್ನೇ ಬರೆ ಯುತ್ತಿರಲಿಲ್ಲ"—ನಕ್ಕು ಅಮಲನು ಹೇಳಿದ.

ಭೂಪತಿ ಸಾಹಿತ್ಯ ರಸದಿಂದ ವಿಮುಖರಾಗಿದ್ದರು. ಚಾರು ಇಂದು ಅವನ ಉತ್ತಮ ಕೃತಿಗಳನ್ನು ಅವರಿಗೆ ತೋರಿಸಿ ಅಮಲನಿಗೆ ಅಪಮಾನ ಮಾಡಿದಳು. ಇದರಿಂದ ಅವನು ಮನಸ್ಸಿನಲ್ಲೆ ರೇಗಿದ. ಇದು ಚಾರುವಿಗೆ ತಿಳಿಯದಿರಲಿಲ್ಲ. ಆಗಲೇ ಅವಳು ನೊಂದುಕೊಂಡಳು. "ನೀವು ನಿಮ್ಮ ತಮ್ಮನ ಮದುವೆ ಮಾಡಿರಿ ನೋಡುವಾ? ಮತ್ತೇನಾದರೂ ಮುಂದೆ ತೊಂದರೆ ಯಾಗಬಾರದು."—ಚಾರು ಮಾತನ್ನು ಬದಲಿಸಲು ರಾಯರಿಗೆ ಹೇಳಿದಳು.

"ಈಗಿನ ಹುಡುಗರು ನಮ್ಮಂತೆ ದಡ್ಡರಲ್ಲ! ಇದ್ದ ಕವಿತ್ವವೆಲ್ಲವನ್ನೂ ಲೇಖನಗಳಲ್ಲಿ–ಕೆಲಸಗಳಲ್ಲಿ ತೋರಿಸುತ್ತಾರೆ! ಎಲ್ಲಿ, ನಿನ್ನ ಮೈದುನನ ಮನ ಸ್ಸನ್ನು ಮದುವೆಗೆ ಒಪ್ಪಿಸು ನೋಡುವಾ?"

ಚಾರು ಹೋದ ಮೇಲೆ ಭೂಪತಿರಾಯರು ಅಮಲನಿಗೆ ಹೇಳಿದರು—"ಅಮಲ, ನನಗೂ ಪತ್ರಿಕೆಗೂ ಗಂಟು ನೋಡು. ಚಾರು ಪಾಪ, ಒಬ್ಬಳೇ ಇರುತ್ತಾಳೆ. ಕೆಲಸ ಬೊಗಸೆ ಏನೂ ಇಲ್ಲ. ಆಗಾಗ ನನ್ನ ಬಳಿಗೆ ಬರುತ್ತಾಳೆ. ಇಣಿ–ಇಣಿಕಿ ನೋಡಿ ಹೋಗುತ್ತಾಳೆ. ಹೇಳು, ಏನು ಮಾಡಲಿ? ನೀನು ಅವಳಿಗೆ ಏನಾದರೂ ಸ್ವಲ್ಪ ಓದಲು ಬರೆಯಲು ತೊಡಗಿಸಿದರೆ ಒಳಿತಾಗುವುದು. ಆಗಾಗ ಹಲವು ಇಂಗ್ಲಿಷ್ ಕಾವ್ಯಗಳನ್ನು ಅನುವಾದಿಸಿ ಹೇಳು, ಎಂದರೆ ಒಳಿತಾಗುವುದು; ಉಪಕಾರವೂ ಆಗುವುದು. ಚಾರು ಸಾಹಿತ್ಯವನ್ನು ಮೆಚ್ಚುತ್ತಾಳೆ."

"ಅದೇನೊ ಸರಿ. ಅಕ್ಕ ಇನ್ನೂ ಸ್ವಲ್ಪ ಕಲಿತರೆ ಅವಳೂ ಲೇಖನ ಬರೆಯುವಳೆಂಬುದರಲ್ಲಿ ಸಂದೇಹವೇ ಇಲ್ಲ."

"ನನಗೆ ಆ ನಂಬುಗೆಯಿಲ್ಲ. ಆದರೆ ಅವಳು ಕನ್ನಡ ಲೇಖನಗಳ ತಿರುಳನ್ನು ನನಗಿಂತಲೂ ಚನ್ನಾಗಿ ಬಲ್ಲಳು."—ಭೂಪತಿ ನಕ್ಕು ಎಂದರು.

"ಅವಳಲ್ಲಿ ಕಲ್ಪನಾಶಕ್ತಿ ತಕ್ಕಷ್ಟಿದೆ. ಇದನ್ನು ಹೆಂಗುಸರಲ್ಲಿ ಕಾಣುವುದು ಕಡಮೆ."

"ಗಂಡಸರಲ್ಲಿಯೂ ಈ ಶಕ್ತಿ ಕಡಮೆ ಪ್ರಮಾಣದಲ್ಲಿರುತ್ತದೆ. ಇದಕ್ಕೆ ನಾನೇ ಉದಾಹರಣೆ! ಒಳ್ಳೇಯದು. ನೀನು ನಿನ್ನ ಅಕ್ಕನಿಗೆ ಏನಾದರೂ ಕಲಿಸಿದರೆ ನಿನಗೆ ಒಂದು ಬಹುಮಾನ ಕೊಡುತ್ತೇನೆ."

"ಏನು ಕೊಡುವಿರಿ, ಹೇಳಬಾರದೆ?"

"ಎಲ್ಲಿಯಾದರೂ ಹುಡುಕಿ ನಿಮ್ಮ ಅಕ್ಕನಿಗೆ ಒಬ್ಬ ಓರಗಿತ್ತಿಯನ್ನು ತರುವೆ."

"ಆದರೆ ಅಕ್ಕ ನನ್ನು ತಿದ್ದಲು ತೊಡಗಬೇಕು! ನನ್ನ ಆಯುಷ್ಯವೇ ಇದರಲ್ಲಿ ಹೋದರೆ?"

ಇಬ್ಬರೂ ನವೀನಕಾಲದ ತರುಣರು, ಇಂತಹ ಮಾತುಗಳನ್ನಾಡಲು ಹಿಂದೆ-ಮುಂದೆ ನೋಡುವುದಿಲ್ಲ.

ವಾಚಕವೃಂದದಲ್ಲಿ ಅಮಲನು ಹೆಸರು ಪಡೆದಿದ್ದಾನೆ. ಈಗ ಅವನ ಸ್ಥಾನವು ಎತ್ತರದ ಮೇಲಿದೆ. ಅವನು ಮೊದಲು ಸಾಲೆಯ ಹುಡುಗರಂತೆ ಇರುತ್ತಿದ್ದ. ಈಗ ಸಮಾಜದೊಳಗಿನ ಗಣ್ಯ-ಮಾನ್ಯ ಪುರುಷರಂತೆ ಆಗಿದ್ದಾನೆ. ಆಗಾಗ ಅವನು ಸಾಹಿತ್ಯಸಭೆಗಳಲ್ಲಿ ನಿಬಂಧಗಳನ್ನು ಓದುತ್ತಾನೆ. ಸಂಪಾದಕರು, ಸಂಪಾದಕರ ದೂತರು ಅವನ ಬಳಿಗೆ ಬರುತ್ತಾರೆ. ಅವನನ್ನು ಕರೆಯುತ್ತಾರೆ, ಊಟ ಉಪಚಾರ ಮಾಡಿಸುತ್ತಾರೆ. ನಾನಾ ಸಭೆ-ಸಮ್ಮೇಲನಗಳ ಪ್ರತಿನಿಧಿಯಾಗಲು, ಹಾಗೂ ಅಧ್ಯಕ್ಷಸ್ಥಾನವನ್ನಲಂಕರಿಸಲು ಅವನನ್ನು ಕೇಳಿಕೊಳ್ಳುತ್ತಿದ್ದಾರೆ. ಮನೆಯ ಆಳುಹೋಳುಗಳಲ್ಲಿ, ಆತ್ಮೀಯ ಬಂಧು-ಬಾಂಧವರಲ್ಲಿ ಆತನ ಮರ್ಯಾದೆ ಹೆಚ್ಚಿದೆ.

ಮಂದಾಕಿನಿ ಇಲ್ಲಿಯ ವರೆಗೆ ಅಮಲನ ವಿಷಯದಲ್ಲಿ ಗಮನ ಕೊಟ್ಟಿರಲಿಲ್ಲ. ಅಮಲ ಚಾರುಲತೆಯರ ಹಾಸ್ಯಾಲಾಪ, ಆಲೋಚನೆಗಳನ್ನು ನೋಡಿ ಇನ್ನೂ ಚಿಕ್ಕವರೆಂದು ಉಪೇಕ್ಷಿಸಿ ತನ್ನ ಕೆಲಸದಲ್ಲಿ ತಾನು ಇರುತ್ತಿದ್ದಳು; ಮನೆಯ ಕೆಲಸ ಬೊಗಸೆಗಳಲ್ಲಿ ತೊಡಗುತ್ತಿದ್ದಳು. ತಾನು ಅವರಿಗಿಂತಲೂ ಹೆಚ್ಚಿನವಳು, ಈ ಮನೆಗೆ ಆಧಾರಸ್ತಂಭಳು ಎಂದು ತಿಳಿದುಕೊಳ್ಳುತ್ತಿದ್ದಳು;

ಅಮಲನು ಮಿತಿಯಿಲ್ಲದೆ ಎಲೆ-ಅಡಕೆ ತಿನ್ನುತ್ತಿದ್ದ. ಇದೆಲ್ಲ ಮಂದಾಕಿನಿಯ ಸ್ವಾಧೀನದಲ್ಲಿರುತ್ತಿತ್ತು. ಆದ್ದರಿಂದ ಚಾರು ನಿಶ್ಚಿಂತಳಾಗಿದ್ದಳು. ಚಾರು, ಅಮಲರಿಬ್ಬರೂ ಸೇರಿ ಮಂದಾಕಿನಿಯ ಎಲೆಗಳನ್ನು ಕಳವು ಮಾಡುತ್ತಿದ್ದರು. ಅವರಿಗೆ ಇದು ಹುಡುಗಾಟಿಕೆಯೆನಿಸುತ್ತಿತ್ತು. ಆದರೆ ಈ ಹುಡುಗಾಟಿಕೆ ಮಂದಾನಿಗೆ ಸರಿಬರುತ್ತಿರಲಿಲ್ಲ.

ಒಬ್ಬ ಆಶ್ರಿತನು ಇನ್ನೊಬ್ಬ ಆಶ್ರಿತನನ್ನು ಪ್ರಸನ್ನ ದೃಷ್ಟಿಯಿಂದ ಕಾಣಲಾರ. ಅಮಲನು ಮಂದಾಕಿನಿಗೆ ಏನೇ ಕೆಲಸ ಹೇಳಿದರೂ ಅದು ಅಪಮಾನವೆಂದು ಅವಳು ತಿಳಿಯುತ್ತಿದ್ದಳು. ಆದರೆ ಚಾರು ಅಮಲನ ಪಕ್ಷಗಟ್ಟುವಳು. ಆದ್ದರಿಂದ ಮಂದಾಕಿನಿ ಬಾಯಿಬಿಟ್ಟು ಏನೂ ಹೇಳುವಂತಿರಲಿಲ್ಲ. ಆದರೆ ಸಂದರ್ಭ ಸಿಕ್ಕಿದಾಗ ಅಮಲನನ್ನು ಜರೆಯುತ್ತಿದ್ದಳು. ಹೊತ್ತು ಸಿಕ್ಕಾಗ ಆಳುಹೋಳುಗಳಲ್ಲಿ ಅವನ ಹೆಸರು ಕೆಡಿಸಲು ಹಿಂದೆಮುಂದೆ ನೋಡುತ್ತಿರಲಿಲ್ಲ. ಒಮ್ಮೊಮ್ಮೆ ಈ ಕೆಲಸದಲ್ಲಿ ಆಳುಹೋಳುಗಳೂ ಸೇರುತ್ತಿದ್ದರು.

ಅಮಲನ ಸ್ಥಾನಮಾನ ಹೆಚ್ಚುತ್ತ ನಡೆಯಿತು. ಆಗ ಮಂದಾ ಹೌಹಾರಿದಳು. ಅಮಲನು ಈಗ ಆ ಹಿಂದಿನ ಅಮಲನಲ್ಲ ! ಈಗ ಅವನ ಸಂಕುಚಿತ ನಮ್ರತನವು ಅಳಿದುಹೋಗತೊಡಗಿದೆ. ಮಂದಿಯನ್ನು ಹಿಯ್ಯಾಳಿಸುವ ಅಧಿಕಾರವು ಅವನ ಕೈಗೇ ಸಿಕ್ಕಿದೆ. ಜಗತ್ತಿನಲ್ಲಿ ಪ್ರತಿಷ್ಠೆಯನ್ನು ಸಂಪಾದಿಸಿ ಸಂಶಯವಿಲ್ಲದೆ ನಿಃಸಂಕೋಚಭಾವದಿಂದ ನಡೆಯುವವನೂ ನಿಶ್ಚಿತ ಅಧಿಕಾರವನ್ನು ಸಂಪಾದಿಸಿದವನೂ ಸಹಜವಾಗಿಯೇ ನಾರಿಯ ದೃಷ್ಟಿಯನ್ನು ಆಕರ್ಷಿಸಬಲ್ಲನು. ಮಂದಾ ನೋಡಿದಳು- ಅಮಲನು ಸುತ್ತಲೂ ಮಾನಮರ್ಯಾದೆಗೆ ಪಾತ್ರನಾಗುತ್ತ ನಡೆದಿದ್ದಾನೆ. ಆಗ ಅವಳೂ ಅಮಲನ ಉಚ್ಚ ಮಸ್ತಕದತ್ತ ಕತ್ತೆತ್ತಿ ನೋಡಿದಳು. ಅಮಲನ ಮೋರೆಯ ಮೇಲೆ ಉಕ್ಕುತ್ತಿರುವ ತಾರುಣ್ಯದ ನವಗೌರವದ ಗರ್ವೋಜ್ವಲ ದೀಪ್ತಿ ಅವಳ ಕಣ್ಣುಗಳಲ್ಲಿ ಒಂದು ಬಗೆಯ ಮೋಹವನ್ನು ಹುಟ್ಟಿಸಿತು. ಅವಳಿಗೆ ಅಮಲನನ್ನು ಇದೀಗ ಹೊಸದಾಗಿ ಕಂಡಂತೆ ತೋರಿತು.

ಈಗ ಯಾರೂ ಎಲೆಯನ್ನು ಕದಿಯುವ ಅವಶ್ಯಕತೆ ಇಲ್ಲ. ಅಮಲನ ಖ್ಯಾತಿಲಾಭದಿಂದ ಚಾರುವಿಗೆ ಸ್ವಲ್ಪಷ್ಟು ಹಾನಿಯಾಯಿತು. ಅವರಿಬ್ಬರ ಷಡ್ಯಂತ್ರದ ಕೌತುಕಬಂಧನವು ವಿಚ್ಛಿನ್ನವಾಯಿತು. ಎಲೆ ಈಗ ತಮ್ಮಷ್ಟಕ್ಕೆ ತಾವೇ ಅಮಲನ ಮುಂದೆ ಬಂದು ಬೀಳತೊಡಗಿದವು ; ಏತಕ್ಕೂ ಕೊರತೆ ಇಲ್ಲ.

ಇಷ್ಟೇ ಅಲ್ಲ, ಅವರಿಬ್ಬರ ಸಂಗಾತ ದಳದಲ್ಲಿ ಮಂದಾಕಿನಿ ನಾನಾ ಕೌಶಲ್ಯಗಳಿಂದ ಕಾಲಿಡುತ್ತಿರುವುದು ಅವರಿಗೆ ಅವನತಿ ಸಮೀಪಿಸಿದ್ದನ್ನು ಸೂಚಿಸಿತು. ಮಂದಾಕಿನಿಯನ್ನು ದೂರ ಇರಿಸುವುದು ಕಠಿನವಾಯಿತು. ಅಮಲನು ಚಾರುಲತೆಯೊಬ್ಬಳನ್ನೇ ತನ್ನ ಜೊತೆಗಾರಳೆಂದೂ ಬುದ್ಧಿವಂತಳೆಂದೂ ತಿಳಿಯುವುದು ಮಂದಾಕಿನಿಗೆ ಸರಿಬರಲಿಲ್ಲ. ಇದಕ್ಕೂ ಮೊದಲು, ಅವರಿಬ್ಬರೂ ಸೇರಿ ಮಾಡಿದ ಉಪೇಕ್ಷೆಯ ಸೇಡನ್ನು ಈಗ ಬಡ್ಡಿ ಸಹಿತ ತೀರಿಸಿಕೊಳ್ಳಲು ಮಂದಾ ಹವಣಿಸುತ್ತಾಳೆ. ಈಗ ಚಾರು ಅಮಲರಿಬ್ಬರು ಒಬ್ಬರನ್ನೊಬ್ಬರು ಸಂಧಿಸುತ್ತಿರುವಾಗಲೇ ಅವಳು ನಡುವೆ ಬಂದು ತನ್ನ ನೆರಳು ಕೆಡಹಿ ಕತ್ತಲೆ ಮಾಡುತ್ತಾಳೆ. ಮಂದಾ ಹೀಗೆ ಒಮ್ಮಿಂದೊಮ್ಮೆಲೇ ಅಡ್ಡ ಬಂದಳು. ಆದರಿಂದ ಚಾರು, ಅಮಲರಿಗೆ ಹಾಸ್ಯ ಪರಿಹಾಸ್ಯ ಮಾಡಲು ಸಮಯ ಸಿಗುವುದೇ ಅಸಂಭವವಾಯಿತು.

ಮಂದಾ ಒಮ್ಮೆಲೇ ಹೀಗೆ ನಡುವೆ ಬಂದುದು ಚಾರುವಿಗೆ ಅಪ್ರಿಯ

ವೆನಿಸಿತು, ಆದರೆ ಅಮಲನಿಗೆ ಅಷ್ಟಾಗಿ ಎನಿಸಿರಲಾರದು. ವಿಮುಖ ರಮಣಿಯ ಮನಸ್ಸು ಕ್ರಮಶಃ ತನ್ನ ಕಡೆಗೆ ಒಲಿಯುತ್ತಿರುವುದನ್ನು ನೋಡಿ ಅಮಲನು ಮನಸ್ಸಿನೊಳಗೇ ಒಂದು ಬಗೆಯ ಆಗ್ರಹದ ಅನುಭವವನ್ನು ಕಾಣತೊಡಗಿದ.

"ಓ, ಬಂದೆಯಾ !" ಮಂದಾ ಬರುವುದನ್ನು ನೋಡಿ ದೂರದಿಂದಲೇ ಚಾರು ಎನ್ನುತ್ತಿದ್ದಳು. "ಬಂದಳೇ? ಎಲ್ಲ ಹಾಳು ಮಾಡಿದಳು !"— ಅಮಲನೂ ಆಗ ಎನ್ನುತ್ತಿದ್ದ. ಪ್ರಪಂಚದ ಎಲ್ಲ ವಸ್ತುಗಳನ್ನು ಜರೆಯುವುದು ಅವರದೊಂದು ಪದ್ಧತಿಯೇ ಆಗಿತ್ತು ! ಕೊನೆಗೆ ಮಂದಾಕಿನಿ ಹತ್ತಿರ ಬಂದಾಗ ಆಗ್ರಹದಿಂದ ಸೌಜನ್ಯವನ್ನು ತೋರಿಸುತ್ತ ಅಮಲನು "ಮತ್ತೇನು ಸುದ್ದಿ ಅಕ್ಕ? ಇಂದು ತಬಕದಲ್ಲೇನಾದರೂ ಹೆಚ್ಚು-ಕಡಮೆ ಕಂಡು ಬಂದಿತೆ ?" ಎಂದ.

"ಅದು ಹೇಗೆ ಬಂದೀತು? ಬೇಡಿದಾಗ ಬರುತ್ತದೆ" ಎಂದಳು ಮಂದಾ.

"ಬೇಡಿ ತರಿಸುವುದಕ್ಕಿಂತ ಕಳವಿನಲ್ಲೇ ಹೆಚ್ಚು ರುಚಿ ಇದೆ" ಎಂದ ಅಮಲ.

"ನೀವು ಏನೋ ಓದುತ್ತಿದ್ದಿರಿ, ಓದಬಾರದೆ ! ಏಕೆ ಸುಮ್ಮನಾದಿರಿ ? ನಾನೂ ಸ್ವಲ್ಪ ಕೇಳುತ್ತೇನೆ."

ಇದಕ್ಕೂ ಮೊದಲು ಪಾಠಾನುರಾಗದಿಂದ ಮಂದಾ ಹೆಸರುವಾಸಿಯಾಗುವ ಹವ್ಯಾಸಕ್ಕೆ ಹೋಗಿರಲಿಲ್ಲ. ಆದರೆ 'ಹೊತ್ತುಬಂದಂತೆ ಹೋಗಬೇಕು !'

ಅರಸಿಕಳಾದ ಮಂದಾಕಿನಿಯ ಮುಂದೆ ಅಮಲನು ಓದುವುದು ಚಾರುವಿಗೆ ಸೇರಲಿಲ್ಲ. ಮಂದಾಕಿನಿಯೂ ತನ್ನ ಲೇಖಗಳನ್ನು ಕೇಳಬೇಕೆಂಬುದು ಅಮಲನ ಇಚ್ಛೆ.

"ಅಮಲನು 'ಕಮಲಾಕಾಂತನ ಕಚೇರಿ' ಯನ್ನು ಕುರಿತು ವಿಮರ್ಶೆ ಬರೆದಿದ್ದಾನೆ. ಅದು ನಿನಗೆ ತಿಳಿ . . . ." ಚಾರು ಎಂದಳು.

"ನಾನು ದಡ್ಡಳೇ ಅಹುದು.—ಆದರೂ ಅಲ್ಪ-ಸ್ವಲ್ಪವಾದರೂ ಅರ್ಥವಾಗಬಹುದಲ್ಲ ?" ಎಂದಳು ಮಂದಾಕಿನಿ.

ಆಗ, ಅಮಲನಿಗೆ ಮತ್ತೊಂದು ದಿನದ ನೆನಪಾಯಿತು. ಚಾರು, ಮಂದಾ ಪಗಡೆಯಾಡುತ್ತಿದ್ದರು. ಅಮಲನು ತನ್ನ ಲೇಖಗಳನ್ನು ಹಿಡಿದುಕೊಂಡು ಆಟದ ಮನೆಯನ್ನು ಹೊಕ್ಕ. ಚಾರುವಿಗೆ ತನ್ನ ಲೇಖವನ್ನೋದಿ ಹೇಳ

ಬೇಕೆಂದು ಅವನಿಗೆ ಆತುರ. ಆದರೆ ಆಟವು ಮುಗಿಯುವ ಲಕ್ಷಣವು ಕಾಣ ಲಿಲ್ಲ. ಆಗ ಅವನು ಮನಸ್ಸಿನಲ್ಲಿ ಸಿಡಿಮಿಡಿಗೊಳ್ಳತೊಡಗಿದ—'ಅಕ್ಕ, ನೀವು ಆಡುತ್ತ ಇರಿ, ನಾನೀಗಲೇ ಹೋಗಿ ಈ ಬರಹವನ್ನು ಅಖಿಲಬಾಬುಗಳಿಗೆ ಓದಿ ತೋರಿಸಿಬರುತ್ತೇನೆ!' ಎಂದ ಅವನು.

ಚಾರು ಅಮಲನ ಅಂಗಿಯನ್ನು ಹಿಡಿದು ಎಳೆಯುತ್ತ, 'ಉಶ್, ತುಸು ಹೊತ್ತು ಕುಳಿತುಕೊಳ್ಳಬಾರದೆ? ಎಲ್ಲಿಗೆ ಹೋಗುತ್ತಿ?' ಎಂದು ಕೂಡಲೇ ತಾನು ಸೋತು ಆಟವನ್ನು ಮುಗಿಸಿದಳು.

"ಇನ್ನು ನಿಮ್ಮ ಓದು ಆರಂಭವಾಗುತ್ತದೆ. ನಾನಿನ್ನು ಹೋಗ ಬಹುದೆ?" ಎಂದಳು ಮಂದಾ.

"ಅಕ್ಕ, ನೀನೂ ಕೇಳಬಾರದೆ?" ಸಭ್ಯತೆಯನ್ನು ತೋರಿಸುತ್ತ ಚಾರು ಕೇಳಿದಳು.

'ಬೇಡ ತಂಗಿ, ನನಗೆ ತಿಳಿಯುವುದಿಲ್ಲ. ಕೋಣನ ಮುಂದೆ ಕಿನ್ನರಿ. . . ನನಗೆ ನಿದ್ದೆ ಬರುವುದು!' ಎಂದು ಅವಳು ಒಮ್ಮೆಲೇ ಆಟ ನಿಲ್ಲಿಸಿ ಇಬ್ಬರ ಮೇಲೂ ರೇಗುತ್ತ ಎದ್ದು ಹೋದಳು.

ಅದೇ ಮಂದಾ ಇಂದು 'ಕಮಲಾಕಾಂತ'ನ ವಿಮರ್ಶೆಯನ್ನು ಕೇಳಲು ಉತ್ಸುಕಳಾಗಿದ್ದಾಳೆ. "ಅಕ್ಕ, ಇದು ಬಹಳ ಸಂತೋಷದ ಸಂಗತಿ! ನನ್ನ ಓದನ್ನು ನೀನು ಕೇಳುತ್ತಿರುವುದು ನನ್ನ ಸೌಭಾಗ್ಯವಲ್ಲವೆ?" ಎಂದು ಅಮಲನು ಪುಟಗಳನ್ನು ತಿರುಹಿ ಓದುವ ಸಿದ್ಧತೆಯಲ್ಲಿ ತೊಡಗಿದ. ಲೇಖನದ ಆರಂಭದಲ್ಲಿ ಅವನು ರಸವನ್ನು ತಕ್ಕಷ್ಟು ಸುರುವಿದ್ದ. ಅದನ್ನು ಬಿಡಲು ಅವನಿಗೆ ಮನಸ್ಸಾಗಲಿಲ್ಲ.

"ಅಮಲ, ನೀನು ಹೇಳಿದ್ದೆಯಲ್ಲ, 'ಜಾಹ್ನವೀ-ಭಂಡಾರ'ದಿಂದ ಕೆಲವು ಮಾಸಿಕಪತ್ರಿಕೆಗಳನ್ನು ತಂದು ಕೊಡುವೆಯಾ?" ಚಾರು ಅವಸರ ದಿಂದ ಕೇಳಿದಳು.

"ಇಂದು ಬೇಡ!"

"ಇಂದೇ ಬೇಕು! ಏಕೆ, ಮರೆತೆಯೇನು?"

"ಏಕೆ ಮರೆಯಲಿ? ನೀನೇ ಹೇಳಿದ್ದೆ.—"

"ಒಳ್ಳೇದು-ಒಳ್ಳೇದು, ತರಬೇಡ! ನೀನು ಓದು. ನಾನಿನ್ನು ಹೋಗು ತ್ತೇನೆ. ಪಾರಸನನ್ನು ಭಂಡಾರಕ್ಕೆ ಕಳಿಸುತ್ತೇನೆ" ಎಂದು ಚಾರು ಎದ್ದು

ಹೋದಳು.

ಅಮಲನಿಗೆ ಅನಿಷ್ಟದ ಸಂದೇಹ ತೋರಿತು. ಮಂದಾ ಮನಸ್ಸಿನಲ್ಲೇ ಏನನ್ನೋ ತಿಳಿದುಕೊಂಡಳು. ಆಗಿನಿಂದಲೇ ಅವಳು ಚಾರುವಿನ ಮೇಲೆ ವಿಷ ಕಾರತೊಡಗಿದಳು. ಚಾರು ಹೋದ ಮೇಲೆ ಅಮಲನು 'ಹೋಗಲೋ ಬೇಡವೋ' ಎಂದು ಯೋಚಿಸುತ್ತ ಅತ್ತಿತ್ತ ಇಣಿಕಿ ನೋಡುತ್ತಿದ್ದ. "ಹೋಗು ತಮ್ಮಾ, ಅಕ್ಕ ಸೆಡವಿಕೊಂಡಿದ್ದಾಳೆ. ಅವಳನ್ನು ಸಮಾಧಾನ ಪಡಿಸು. ನನಗೆ ಓದಿ ಹೇಳಿದರೆ ನಿನಗೆ ತೊಂದರೆ ತಪ್ಪಿದ್ದಲ್ಲ"—ಮಂದಾ ತುಸು ನಕ್ಕು ಹೇಳಿದಳು.

ಆ ಮೇಲೆ ಅಮಲನಿಗೆ ಅಲ್ಲಿಂದ ಎದ್ದು ಹೋಗುವುದು ಸ್ವಲ್ಪ ಕಷ್ಟಕ್ಕೆ ಬಂದಿತು. ಅವನು ಚಾರುವಿನ ಮೇಲೆ ಮುನಿಸುಗೊಂಡು "ಏಕೆ, ತೊಂದರೆ ಯೆಲ್ಲಿಯದು!" ಎನ್ನುತ್ತ ಪುಟಗಳನ್ನು ತಿರುವಿ ಓದುವ ಸಿದ್ಧತೆ ಮಾಡಿ ಕೊಂಡ.

ಮಂದಾ ಎರಡೂ ಕೈಗಳಿಂದ ಆತನ ಕಾಪಿಯನ್ನು ಮುಚ್ಚಿ ಹಿಡಿದು "ಬೇಡ ಬಿಡು" ಎಂದಳು.

ಹೀಗೆಂದು ಮಂದಾಕಿನಿ ಒತ್ತಿ ಬರುತ್ತಿರುವ ಕಣ್ಣೀರನ್ನು ತಡೆಯುತ್ತ ಅನ್ಯತ್ರ ಹೊರಟು ಹೋದಳು.

೬

ಚಾರು ಔತಣಕ್ಕೆ ಹೋಗಿದ್ದಳು. ಮಂದಾಕಿನಿ ಕುಳಿತುಕೊಂಡು ಜಡೆ ಹಾಕಿಕೊಳ್ಳುತ್ತಿದ್ದಳು. ಆಗ "ಅಕ್ಕಾ" ಎನ್ನುತ್ತ ಅಮಲನು ಒಳಗೆ ಬಂದ. ಚಾರು ಔತಣಕ್ಕೆ ಹೋದ ಸಂಗತಿ ಅಮಲನಿಗೆ ಗೊತ್ತಿರಬಹುದೆಂದು ಮಂದಾ ತಿಳಿದಿದ್ದಳು. "ಓಹೋ, ಅಮಲ! ಯಾರನ್ನೋ ಕಾಣಲು ಬಂದಾಗ ಯಾರೋ ಸಿಕ್ಕಿದರು; ನಿನ್ನ ಅದೃಷ್ಟವೇ ಅಂತಹದು" ಮಂದಾ ನಗುತ್ತ ಎಂದಳು.

"ಕತ್ತಿಗೆ ಎಡಗಡೆಯ ಹುಲ್ಲೂ ಒಂದೇ, ಬಲಗಡೆಯ ಹುಲ್ಲೂ ಒಂದೇ!"— ಕುಳಿತುಕೊಳ್ಳುತ್ತಲಿದ್ದ ಅಮಲ ಹೇಳಿದ.

ಆ ಮೇಲೆ "ಅಕ್ಕ, ನಿಮ್ಮ ದೇಶದ ಕಥೆ ಹೇಳು ನೋಡುವಾ? ಕೇಳಬೇಕೆಂಬ ಆಸೆಯಾಗಿದೆ" ಎಂದ ಅವಳ ಕಡೆ ನೋಡಿ.

ಬರೆಯಲು ಅಮಲನಿಗೆ ವಿಷಯ ಸಂಗ್ರಹವು ಬೇಕು. ಆದ್ದರಿಂದ ಎಲ್ಲರ ಮಾತನ್ನೂ ಅವನು ಲಕ್ಷ್ಯಗೊಟ್ಟು ಕೇಳುತ್ತಿದ್ದ. ಈಗ ಅವನು ಮಂದಾನ ಮಾತುಗಳನ್ನು ಮೊದಲಿನಂತೆ ಉಪೇಕ್ಷೆಯಿಂದ ಕಾಣುವುದಿಲ್ಲ. ಮಂದಾನ ಮನಸ್ಸತ್ವ, ಅವಳ ಇತಿಹಾಸ ಇವೆಲ್ಲ ಈಗ ಅವನಿಗೆ ಉತ್ಸಾಹವನ್ನು ತರುತ್ತವೆ. ಅವಳು ಎಲ್ಲಿ ಹುಟ್ಟಿದಳು, ಹೇಗೆ ಬೆಳೆದಳು, ಯಾವಾಗ ಮದುವೆಯಾಯಿತು, ಮುಂತಾದ ಎಲ್ಲ ಸಂಗತಿಗಳನ್ನು ವಿವರವಾಗಿ ಕೇಳತೊಡಗಿದ. ಆವಳ ಕ್ಷುಲ್ಲಕ ಜೀವನವೃತ್ತಾಂತದ ಬಗೆಗೆ ಅವನಿಗಿಷ್ಟು ಕುತೂಹಲವೇಕೆ, ಎಂಬುದನ್ನವನು ತೋರ್ಪಡಿಸಲಿಲ್ಲ. ಇತ್ತ ಮಂದಾ ಆನಂದದಿಂದ ತನ್ನ ವಿಷಯವನ್ನು ಕುರಿತು ಹೇಳುತ್ತಲೇ ಇದ್ದಳು. ನಡುನಡುವೆ 'ಏನು ಹೇಳುತ್ತಿದ್ದೇನೆ, ಸರಿಯಾಗಿದೆಯಲ್ಲವೆ?' ಎನ್ನುತ್ತಿದ್ದಳು.

"ಸರಿಯಾಗಿದೆ! ಮುಂದೆ ಹೇಳು!"—ಉತ್ಸಾಹಕೊಡುತ್ತ ಹೇಳುತ್ತಿದ್ದ ಅಮಲ.

ನಡೆದ ಕತೆ ಇಷ್ಟು: ಮಂದಾನ ತಂದೆಗೆ ಒಬ್ಬ ಗುಮಾಸ್ತನಿದ್ದ. ಆ ಗುಮಾಸ್ತನು ತನ್ನ ಎರಡನೆಯ ಹೆಂಡತಿಯ ಕೂಡ ಕಾದಾಡಿ ಒಂದೊಂದು ದಿನ ಊಟವನ್ನೇ ಬಿಡುತ್ತಿದ್ದ. ಕೊನೆಗೆ ಅವನು ಹಸಿವೆಯಿಂದ ಕಂಗಾಲಾಗಿ ಮಂದಾನ ಮನೆಗೆ ಕದ್ದುಮುಚ್ಚಿ ಊಟಕ್ಕೆ ಬರುತ್ತಿದ್ದ. ಒಂದು ದಿನ ಅವನು ಮಂದಾನ ಮನೆಗೆ ಬರುತ್ತಿರುವಾಗ ಅಕಸ್ಮಾತ್ ಹೆಂಡತಿಯ ಕೈಗೆ ಸಿಕ್ಕು ಬಿದ್ದ. ಈ ಎಲ್ಲ ಸಂಗತಿಯನ್ನು ಅಮಲನು ಮನಸುಗೊಟ್ಟು ಕೇಳುತ್ತ-ಕೇಳುತ್ತ ಸಕೌತುಕನಾಗಿ ನಗುತ್ತಿದ್ದ. ಇಷ್ಟರಲ್ಲಿ ಚಾರು ಕೋಣೆಯೊಳಗೆ ಬಂದಳು.

ಕಥೆ ಅಲ್ಲಿಗೇ ನಿಂತಿತು. ಅವಳು ಬಂದುದರಿಂದ ಒಮ್ಮೆಲೇ ಸಭೆ ಚದುರಿದಂತಾಯಿತು. ರಭಸದಿಂದ ಬೀಳುತ್ತಿರುವ ಮಳೆ ಒಮ್ಮೆಲೇ ನಿಂತಿತು. ಇದು ಚಾರುವಿಗೆ ನಿಚ್ಚಳವಾಗಿ ತಿಳಿಯಿತು.

"ಎಷ್ಟು ಬೇಗನೇ ಬಂದೆಯಲ್ಲ ಅಕ್ಕ?" ಅಮಲನು ಕೇಳಿದ.

"ಹೌದು, ಸರಿ! ಬಹಳ ಬೇಗನೇ ಬಂದೆ!" ಎಂದು ಹೋಗತೊಡಗಿದಳು ಚಾರು.

"ಚನ್ನಾಯಿತು. ನನ್ನನ್ನು ಪಾರುಮಾಡಿದೆ. ಯಾವಾಗ ಬರುವೆಯೋ ಎಂದು ದಾರಿಕಾಯುತ್ತಿದ್ದೆ. ಮನ್ಮಥದತ್ತರ 'ಸಂಜೆಯ ಹಕ್ಕಿ' ಎಂಬ ಹೊಸ ಪುಸ್ತಕ ಪ್ರಕಟವಾಗಿದೆ. ನಿನಗೆ ಓದಿ ತೋರಿಸಲು ಬಂದಿದ್ದೇನೆ."

"ಈಗ ಬೇಡ, ನನಗೆ ಬೇರೆ ಕೆಲಸವಿದೆ."

"ಯಾವ ಕೆಲಸ ಹೇಳು, ನಾನು ಮಾಡುತ್ತೇನೆ."

ಅಮಲನು ಇಂದು ಪುಸ್ತಕ ತಂದು ಓದಿ ಹೇಳುವನೆಂದು ಚಾರು ತಿಳಿದಿದ್ದಳು. ಆದ್ದರಿಂದ ಅವಳು ಅಧೈರ್ಯವಶ ನಿಮಂತ್ರಣಕಾರಿಗಳು ಅನುನಯ ವಿನಯ ಮಾಡಿದರೂ ಗಮನಿಸದೆ ಪ್ರಕೃತಿ ಸ್ವಾಸ್ಥ್ಯವಿಲ್ಲವೆಂದು ನೆವವೊಡ್ಡಿ ಮನೆಗೆ ಬಂದಿದ್ದಾಳೆ. ಈಗ ಅವಳಿಗೆ ಸಂಕೋಚವೆನಿಸತೊಡಗಿತು,—ಇಲ್ಲಿಗಿಂತಲೂ ಅವಳು ಅಲ್ಲಿ ಸುಖದಿಂದ ಇದ್ದಳು. ಅವಳು ಒಂದದ್ದು ಬಹಳ ಅನ್ಯಾಯವಾಯಿತು.

ಮಂದಾಕಿನಿಯೂ ಕಡಮೆ ನಿರ್ಲಜ್ಜಳಲ್ಲ! ಮನೆಯಲ್ಲಿ ಒಬ್ಬಳೇ ಕುಳಿತುಕೊಂಡು ಅಮಲನ ಕೂಡ ಹಲ್ಲು ಕಿರಿಯುತ್ತಿದ್ದಾಳೆ! ಜನರು ನೋಡಿದರೆ ಏನೆಂದಾರು! ಆದರೆ ಮಂದಾಕಿನಿಗೆ ತನ್ನ ಸಿಟ್ಟನ್ನು ತೋರಿಸುವುದು ಚಾರುವಿಗೆ ಕಠಿಣವಾಗಿತ್ತು. ಮಂದಾಕಿನಿಯೂ ತನ್ನ ಇಂತಹ ನಡತೆಯ ಉದಾಹರಣೆಯನ್ನು ತೋರಿಸಿದರೆ ಚಾರುವಿನ ಮರ್ಯಾದೆ ಉಳಿಯುವುದೆ? ಆದರೆ ಅದು ಬೇರೆ, ಇದು ಬೇರೆ. ಅವಳು ಅಮಲನಿಗೆ ಬರೆಯಲು ಪ್ರೋತ್ಸಾಹಿಸುತ್ತಾಳೆ, ಅಮಲನ ಕೂಡ ಸಾಹಿತ್ಯವನ್ನು ಕುರಿತ ಆಲೋಚನೆ ಮಾಡುತ್ತಾಳೆ. ಆದರೆ ಮಂದಾಕಿನಿಗೆ ಇದು ಎಂದಿಗೂ ಸಾಧ್ಯವಿಲ್ಲ. ಮಂದಾ ಈ ಸರಳ ಹೃದಯದ ತರುಣನನ್ನು ಹಿಡಿಯಲು ಬಲೆಯನ್ನು ಬೀಸತೊಡಗಿದ್ದಾಳೆ. ಈ ಭಯಂಕರ ವಿಪತ್ತಿನಿಂದ ಅಮಲನನ್ನು ಉಳಿಸುವುದು ಅವಳ ಕರ್ತವ್ಯ. ಅಮಲನಿಗೆ ಈ ಮಾಯಾವಿನಿಯ ದುರಭಿಪ್ರಾಯವನ್ನು ಹೇಗೆ ತಿಳಿಸುವುದು? ತಿಳಿಸುವುದರಿಂದ ಅವನ ಪ್ರಲೋಭನವು ನಿವೃತ್ತವಾಗುವುದರ ಬದಲು ಇನ್ನೂ ಹೆಚ್ಚಾದರೆ?

ಪಾಪ ಉಮಾಪತಿರಾಯರು? ಅವರು ವರ್ತಮಾನಪತ್ರಿಕೆಗಾಗಿ ತಲೆ ತುರಿಸಿಕೊಳ್ಳುತ್ತಿದ್ದಾರೆ. ಇತ್ತ ಮಂದಾಕಿನಿ ಒಂದು ಮೂಲೆಯಲ್ಲಿ ಕುಳಿತುಕೊಂಡು ಅಮಲನನ್ನು ಆಕರ್ಷಿಸಲು ಹೊಂಚುಹಾಕುತ್ತಿದ್ದಾಳೆ! ಅವರು ನಿಶ್ಚಿಂತರಿದ್ದಾರೆ! ಮಂದಾನಲ್ಲಿ ಅವರಿಗೆ ವಿಶ್ವಾಸ ಬಹಳ. ಇದನ್ನೆಲ್ಲ ಚಾರು

ಕಣ್ಣಾರೆ ಕಂಡು ಸುಮ್ಮನೆ ಹೇಗೆ ಇರಬಲ್ಲಳು ? ಇದು ದೊಡ್ಡ ಅನ್ಯಾಯ.

ಆದರೆ, ಮೊದಲಿಗೋ ಅಮಲನು ಒಳ್ಳೆಯವನಿದ್ದ,—ಅಂತೆಯೇ ಲೇಖಕನಾಗಿ ಹೆಸರು ಪಡೆದ. ಆಗಿನಿಂದಲೇ ಈ ಎಲ್ಲ ಅನ್ಯಾಯಗಳು ತಲೆದೋರತೊಡಗಿವೆ. ಅವನ ಬರವಣಿಗೆಗೆ ಚಾರುವೇ ಮೂಲಾಧಾರ. ಯಾವ ಕೆಟ್ಟ ಗಳಿಗೆಯಲ್ಲಿ ಅವಳು ಅಮಲನಿಗೆ ಬರೆಯಲು ಪ್ರೋತ್ಸಾಹ ಕೊಟ್ಟಿದ್ದಳೊ ? ಈಗ ಮೊದಲಿನಂತೆ ಚಾರುವಿನ ಆಟವು ನಡೆಯುವುದೆ ? ಅಮಲನನ್ನು ಐದು ಜನ ಸತ್ಕರಿಸುತ್ತಿದ್ದಾರೆ. ಅವರಲ್ಲಿ ಒಬ್ಬರು ಕಡಿಮೆಯಾದರೆ ನಷ್ಟವೇನು ?

ಈಗ ಅಮಲನು ಚಾರುವಿನ ಕೈಬಿಟ್ಟು ಐದು ಜನರ ಬಲೆಗೆ ಬಿದ್ದಿದ್ದಾನೆ, ದೊಡ್ಡ ಕುತ್ತಿಗೆ ಎದುರಾಗಿದ್ದಾನೆ. ಚಾರುವಿಗೆ ಇದೆಲ್ಲ ತಿಳಿದಿದೆ. ಈಗ ಚಾರು ತನಗೆ ಸರಿಸಮಾನಳೆಂದು ಅಮಲನು ಎಣಿಸುವುದಿಲ್ಲ. ಚಾರುವಿಗಿಂತಲೂ ಅವನು ಬಹಳ ಮುಂದೆ ಹೋಗಿದ್ದಾನೆ. ಈಗ ಅವನು ಲೇಖಕ, ಚಾರು ವಾಚಕಳು. ಇದನ್ನು ತಡೆಯಲೇ ಬೇಕು.

ಅಯ್ಯೋ, ಸರಳಸ್ವಭಾವದ ಅಮಲ, ಮಾಯಾವಿನಿ ಮಂದಾಕಿನಿ, ಮತ್ತೆ ಪಾಪ ಉಮಾಪತಿರಾಯರು !

೬

ಆ ದಿನ ಆಷಾಢದ ನವೀನ ಮೇಘಗಳಿಂದ ಆಕಾಶವು ಮುಚ್ಚಿ ಹೋಗಿತ್ತು. ಕೋಣೆಯಲ್ಲಿ ಕತ್ತಲೆ ಹೆಪ್ಪುಗಟ್ಟಿದಂತಾಗಿತ್ತು. ಆದ್ದರಿಂದ ಚಾರು ಕಿಟಕಿಯನ್ನು ತೆರೆದು ಬಾಗಿ ಕುಳಿತುಕೊಂಡು ಏನನ್ನೋ ಬರೆಯುತ್ತಿದ್ದಳು.

ಅಮಲನು ಮೆಲ್ಲಡಿಯಿಂದ ಯಾವಾಗ ಬಂದು ಹಿಂದೆ ನಿಂತನೊ ಚಾರುವಿಗೆ ಗೊತ್ತೇ ಇಲ್ಲ. ಸ್ನಿಗ್ಧ ಪ್ರಕಾಶದಲ್ಲಿ ಚಾರು ಬರೆಯುತ್ತಿದ್ದಳು, ಅಮಲನು ಅದನ್ನು ಓದುತ್ತಲಿದ್ದ. ಅವಳ ಎದುರು ಅಮಲನೇ ಬರೆದ ಒಂದೆರಡು ಅಚ್ಚಾದ ಬರೆಹಗಳು ಬಿದ್ದಿವೆ. ಚಾರುವಿಗೆ ಅವು ಆದರ್ಶ ಬರೆಹಗಳಾಗಿದ್ದವು.

‘ ನಿನಗೆ ಬರೆಯಲು ಬರುವುದಿಲ್ಲವೆಂದು ಹೇಳುತ್ತಿದ್ದೆಯಲ್ಲ ? ’—ಒಮ್ಮೆಲೇ ಅಮಲನ ಈ ದನಿ ಕೇಳಿ ಚಾರು ಬೆಚ್ಚಿಬಿದ್ದಳು. ತಾನು ಬರೆಯುತ್ತಿದ್ದದನ್ನು ಕೂಡಲೇ ಮುಚ್ಚಿಕೊಳ್ಳುತ್ತ “ ಇದು ಅನ್ಯಾಯವಲ್ಲದೆ ಏನು ? ”–ಎಂದಳು.

" ನಾನೇನು ಅನ್ಯಾಯ ಮಾಡಿದೆ ? "

" ಮರೆಗೆ ನಿಂತು ಏಕೆ ನೋಡುತ್ತಿದ್ದೆ ? "

' ಪ್ರಕಟರೂಪದಿಂದ ನೋಡಲು ಸಾಧ್ಯವಿರಲಿಲ್ಲವೆಂದು. '

ಚಾರು ತಾನು ಬರೆದುದನ್ನು ಹರಿದು ಒಗೆಯುವುದರಲ್ಲಿದ್ದಳು. ಅಮಲನು ಕೂಡಲೆ ಅವಳ ಕೈಯಿಂದ ಅದನ್ನು ಕಸಿದುಕೊಂಡ. " ನೀನು ಓದಿದರೆ ನನ್ನ ಸ್ಥಾನವು ಹೆಚ್ಚುವುದು "—ಚಾರು ಹೇಳಿದಳು.

" ಓದಲು ಅಡ್ಡಿ ಮಾಡಿದರೆ ನಾನೇನು ಮಾಡಲಿ ? " ಎಂದ ಅಮಲ.

" ನನ್ನಾಣೆ, ಅಮಲ ಓದಬೇಡ ! "

ಕೊನೆಗೆ ಚಾರು ಸೋಲಲೇಬೇಕಾಯಿತು. ತಾನು ಬರೆದುದನ್ನು ಅಮಲನಿಗೆ ತೋರಿಸಬೇಕೆಂಬ ಕುತೂಹಲವೂ ಅವಳಿಗಿದ್ದಿತು. ತೋರಿಸುವಾಗ ಇಷ್ಟು ನಾಚಿಕೆ ಆಗಬಹುದೆಂಬುದನ್ನು ಅವಳು ತಿಳಿದಿರಲಿಲ್ಲ. ಅಮಲನು ಅನುನಯವನ್ನು ತೋರಿಸಿದ ಮೇಲೆ ಅವನಿಗೆ ಓದಲು ಅಪ್ಪಣೆ ಸಿಕ್ಕಿತು. ಚಾರುವಿನ ಕೈಕಾಲು ಹರಿಯತೊಡಗಿದವು. " ನಾನು ಸ್ವಲ್ಪ ಎಲೆ ಅಡಕೆ ತರುವೆ " ಎಂದು ಚಟ್ಟನೆ ಎದ್ದು ಅವಳು ಹತ್ತಿರದ ಕೋಣೆಗೆ ಪಾನ್‌ಪಟ್ಟಿ ಕಟ್ಟಲು ಹೋದಳು.

ಓದುವುದನ್ನು ಮುಗಿಸಿ ಅಮಲನು 'ಬಹಳ ಚನ್ನಾಗಿ ಬರೆದಿರುವೆ' ಎಂದ.

ಚಾರು ಪಾನ್‌ಪಟ್ಟಿಗೆ ಲವಂಗ ಚುಚ್ಚುವುದನ್ನು ಮರೆತಳು. " ಇರಲಿ ಬಿಡು, ಹುಡುಗಾಟಿಕೆ ಬೇಡ. ಕೊಡು, ನಾನು ಬರೆದುದನ್ನು ಇಲ್ಲಿ.' ಎಂದಳು.

" ಈಗಲೇ ಕೊಡುವುದಿಲ್ಲ. ಇದರ ಇನ್ನೊಂದು ಪ್ರತಿ ಬರೆದು ಅಚ್ಚಿಗೆ ಕಳಿಸುತ್ತೇನೆ. "

" ಹೂಂ, ನೀನೇನೊ ಕಳಿಸಬಹುದು. ಆದರೆ ಇದು ಸಾಧ್ಯವಿಲ್ಲ. "

ಚಾರು ಬಹಳ ಚಡಪಡಿಸತೊಡಗಿದಳು. ಅಮಲನೂ ಬಿಡಲಿಲ್ಲ. ಚಾರುವಿನ ಆ ಬರಹ ಪತ್ರಿಕೆಯಲ್ಲಿ ಪ್ರಕಟಿಸಲು ಯೋಗ್ಯವಿದೆಯೆಂದು ಅವನು ಒಂದೇ ಸಮನೆ ಹಟವನ್ನೇ ಹಿಡಿದ. "ನಿನ್ನನ್ನು ನಾನು ಗೆಲ್ಲಬಹುದೆ ! ಹಿಡಿದ ಹಟವನ್ನು ನೀನು ಬಿಟ್ಟಿಪ್ಪನಲ್ಲ " ಎಂದಳು ಚಾರು ನಿರಾಶಳಾಗಿ.

" ಅಣ್ಣನಿಗೆ ಒಂದು ಸಲ ತೋರಿಸಬೇಕು "—ಅಮಲನು ಹೇಳಿದ.

ಕೇಳಿ ಚಾರು ವೀಳ್ಯವನ್ನು ಅಲ್ಲಿಯೆ ಬಿಟ್ಟು ಅವಸರದಿಂದ ಎದ್ದು ನಿಂತಳು. ಅದನ್ನು ಕಸಿದುಕೊಳ್ಳಲು ಯತ್ನಿಸುತ್ತ " ಬೇಡ, ಅವರಿಗೆ ತೋರಿಸಬೇಡ.

ಅವರಿಗೆ ನಾನು ಲೇಖನ ಬರೆಯುವುದನ್ನು ಹೇಳಿದರೆ ಮುಂದೆ ನಾನು ಒಂದು ಅಕ್ಷರವನ್ನೂ ಬರೆಯುವುದಿಲ್ಲ" ಎಂದಳು.

"ಅಕ್ಕ, ಅದು ಬಹಳ ದೊಡ್ಡ ತಪ್ಪು. ಅಣ್ಣ ಏನೇ ಹೇಳಲಿ, ಇದನ್ನು ನೋಡಿ ಸಂತೋಷಪಡುವುದರಲ್ಲಿ ಸಂಶಯವಿಲ್ಲ."

"ಆಗಲಿ, ನನಗೇನೂ ಅದು ಬೇಕಾಗಿಲ್ಲ."

ತಾನು ಲೇಖವನ್ನು ಬರೆದು ಅಮಲನನ್ನು ಬೆರಳುಕಚ್ಚಿಸುವೆನೆಂದು ಪಣ ತೊಟ್ಟು ಚಾರು ಕುಳಿತಿದ್ದಳು. ಮಂದಾಕಿನಿ ಹಾಗೂ ಅವಳಲ್ಲಿ ಎಷ್ಟೊಂದು ಅಭ್ಯಂತರ? ಇದನ್ನು ಚಾರು ಒರೆಗೆ ಹಚ್ಚದೆ ಬಿಡಳು. ಇದಕ್ಕೂ ಮೊದಲು ಅವಳು ಎಷ್ಟೋ ಸಲ ಬರೆಯಲು ಯತ್ನಿಸಿ ಹರಿದು ಹರಿದು ಒಗೆದಿದ್ದಾಳೆ. ಅವಳು ಅಮಲನಂತೆಯೇ ಬರೆಯುತ್ತಿದ್ದಳು. ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ಹಲವು ಕಡೆಗೆ ಅದು ಅಮಲನ ನಕಲಿನಂತೆ ಕಾಣುತ್ತಿತ್ತು. ಅಲ್ಲಲ್ಲಿ ಸುಂದರವಾಗಿತ್ತು; ಮತ್ತೆ ಕೆಲವು ಕಡೆಗೆ ಸಾಧಾರಣ. ಅಮಲನು ನೋಡಿ ಖಂಡಿತವಾಗಿಯೂ ನಗುವನು. ಇದನ್ನು ನೆನೆದುಕೊಂಡು ಚಾರು ಹರಿದು ಚೂರು ಚೂರು ಮಾಡಿ ಕೆರೆಗೆ ಹಾಕಿದಳು. ಅಮಲನ ಕೈಗೆ ಒಂದು ತುಂಡೂ ಸಿಗಬಾರದಲ್ಲವೇ?

ಅವಳು ಮೊದಲು ಬರೆದದ್ದು 'ಶ್ರಾವಣಮಾಸದ ಮೋಡ.' ಭಾವಾಶ್ರು ಜಲದಿಂದ ಅಭಿಷಿಕ್ತವಾದ ಒಂದು ಅತಿ ಉತ್ತಮವಾದ ಲೇಖವನ್ನು ತಾನು ಬರೆದಿದ್ದಾಗಿ ಅವಳು ಭಾವಿಸಿದ್ದಳು. "ಅದು ಅಮಲನ 'ಆಷಾಢಮಾಸದ ಚಂದ್ರ'ನ ಅನುಕರಣ ಮಾತ್ರ" ಎಂದು ಮತ್ತೊಮ್ಮೆ ತಿಳಿದಳು. 'ಹೇ ಚಂದ್ರ, ಕಳ್ಳನಂತೆ ನೀನು ಕದ್ದುಮುಚ್ಚಿ ಮರೆಯಲ್ಲಿ ತಿರುಗಾಡುವುದೇಕೆ?' ಎಂದು ಅಮಲನು ಬರೆದಿದ್ದಾನೆ. "ಹೇ ಕಾದಂಬಿನೀಸಖಿ, ನೀನು ಎಲ್ಲಿಂದ ಬಂದೆ? ನಿನ್ನ ನೀಲಬಣ್ಣದ ಸೆರಗಿನಲ್ಲಿ ಚಂದ್ರನನ್ನು ಕಳವಿನಿಂದ ಮುಚ್ಚಿಕೊಂಡು ಓಡುತ್ತಿರುವೆಯಾ?" ಮುಂತಾಗಿ ಚಾರು ಬರೆದಿದ್ದಳು.

ಅಮಲನ ಶೈಲಿಯ ಅನುಕರಣೆಯನ್ನು ಚಾರುವಿಗೆ ಬಿಡುವುದಾಗಲಿಲ್ಲ.

ತನ್ನ ಬರಹಕ್ಕೆ ಚಂದ್ರ, ಮೇಘ, ಶೇಫಾಲಿಕಾ ಮುಂತಾದವುಗಳನ್ನು ಬಿಟ್ಟು ಅವಳು 'ದೇವಿಯ ಮಂದಿರದಲ್ಲಿ' ಎಂದು ಹೆಸರಿಟ್ಟಳು. ಅವಳ ತವರೂರಿನಲ್ಲಿ ವೃಕ್ಷಗಳ ನೆರಳಿನಂತಿದ್ದ ಅಂಧಃಕಾರಮಯವಾದ ಕೆರೆಯ ದಂಡೆಯ ಮೇಲೆ ಕಾಳೀದೇವಿಯ ಮಂದಿರವಿತ್ತು. ಆ ಮಂದಿರವನ್ನು ಕುರಿತು

ಬಾಲ್ಯದ ಕಲ್ಪನೆ, ಭಯ, ಔತ್ಸುಕ್ಯದಂತೆ ವಿಚಿತ್ರ ಸ್ಮೃತಿಯೂ ಇತ್ತು. ಆ ದೇವಿಯ ಮಾಹಾತ್ಮ್ಯವನ್ನು ಕುರಿತು ಊರತುಂಬೆಲ್ಲ ಚಿರಪ್ರಚಲಿತ ಪ್ರಾಚೀನ ಕಿಂವದಂತಿಗಳಿದ್ದವು; ಇವುಗಳೇ ಅವಳ ಬರೆಹಕ್ಕೆ ಆಧಾರವಾಗಿದ್ದವು. ಆದರ ಮೊದಲಿನ ಭಾಗವು ಅಮಲನ ಶೈಲಿಯಂತೆ ಕಾವ್ಯಾಡಂಬರಪೂರ್ಣವಿತ್ತು; ಆದರೆ ಮುಂದೆ ಒಳ್ಳೇ ಸರಳವಾಗಿತ್ತು. ಊರ ಭಾಷಾಭಂಗಿ, ಆಭಾಸದಿಂದ ಕೂಡಿತ್ತು.

ಅಮಲನು ಕಸಿದುಕೊಂಡದ್ದು ಅದೇ ಬರಹವನ್ನು! ಆರಂಭದ ಭಾಗವು ಬಹಳ ಸುಂದರವಾಗಿದೆ. ಆದರೆ ಆ ಕವಿತ್ವಪೂರ್ಣ ಶೈಲಿ ಕೊನೆಯ ವರೆಗೆ ಉಳಿದಿಲ್ಲವೆಂದು ಅವನು ಮನಗಂಡ. ಏನೇ ಆಗಲಿ, ಪ್ರಥಮಲೇಖನವಾದ್ದರಿಂದ ಲೇಖಿಕೆಯ ಪ್ರಯತ್ನವು ಪ್ರಶಂಸಾರ್ಹವಾಗಿದೆ.

"ಅಮಲ, ನಾವಿಬ್ಬರೂ ಸೇರಿ ಒಂದು ವೃತ್ತಪತ್ರಿಕೆಯನ್ನು ಹೊರಡಿಸಿದರೆ ಹೇಗೆ?" ಎಂದಳು ಚಾರು.

"ರೌಪ್ಯಚಂದ್ರಗಳು ಬಹಳ ಬೇಕು. ಅವಿಲ್ಲದೆ ಕೆಲಸ ಸಾಗದು."

"ನಮ್ಮ ಈ ಪತ್ರಿಕೆಗೆ ಬಹಳ ಹಣವೇನೂ ಬೇಡ. ಪ್ರತಿಗಳು ಸ್ವಲ್ಪವೇ ಸಾಕು. ಕೈಯಿಂದಲೂ ಬರೆಯಬಹುದು. ಅದರಲ್ಲಿ ನನ್ನ ಹಾಗೂ ನಿನ್ನ ಹೊರತು ಯಾರ ಲೇಖನಕ್ಕೂ ಆಸ್ಪದವಿರಲಾರದು. ಅದನ್ನು ಮತ್ತೆ ಯಾರಿಗೂ ಓದಲು ಕೊಡಬಾರದು. ಬರಿಯ ಎರಡು ಪ್ರತಿಗಳನ್ನೇ ಹೊರಡಿಸಿದರೆ ಸಾಕು.—ಒಂದು ನಿನಗೆ, ಇನ್ನೊಂದು ನನಗೆ."

ಈ ಮಾತುಕತೆ ಹಲವೇ ದಿನಗಳ ಹಿಂದೆ ನಡೆದಿದ್ದರೂ ಅಮಲನು ಆನಂದದಿಂದ ಕುಣಿದಾಡುತ್ತಿದ್ದ. ಆದರೆ ಈಗ ಅವನಿಗೆ ಆ ಉತ್ಸಾಹವಿಲ್ಲ. ಈಗ ಹತ್ತಿಪ್ಪತ್ತು ರೂಪಾಯಿ ಬಹುಮಾನವಿಲ್ಲದೆ ಅವನು ಬರೆಯುವುದಿಲ್ಲ. ಬರೆಯಲು ಆನಂದವೂ ಎನಿಸುವುದಿಲ್ಲ. ಆದರೂ ಹಿಂದಿನ ಗೌರವವನ್ನು ಕಾಯ್ದುಕೊಳ್ಳಲು ಆತನು ಉತ್ಸಾಹವಿತ್ತ. "ಅದು ಬಹಳ ಒಳ್ಳೆಯ ಕೆಲಸ" ಎಂದ.

"ಆದರೆ ಒಂದು ನಿಶ್ಚಯ ಮಾಡಬೇಕು. ನಮ್ಮ ಪತ್ರಿಕೆಯ ಹೊರತು ನೀನು ಬೇರೆ ಪತ್ರಿಕೆಗೆ ಲೇಖನ ಬರೆಯಲಾರೆ!" ಎಂದಳು ಚಾರು.

"ಹಾಗಾದರೆ ಸಂಪಾದಕರು ನನ್ನನ್ನು ಜೀವಸಹಿತ ಉಳಿಯಗೊಡುವುದೇ ಇಲ್ಲ"—ಅಮಲನೆಂದ.

"ಮತ್ತೆ ನನ್ನ ಬಳಿ ಹೊಡೆಯಲು ಏನೂ ಅಸ್ತ್ರವಿಲ್ಲವೆಂದು ತಿಳಿದೆಯಾ?"

ಅವರಿಬ್ಬರೂ ಒಂದು ನಿರ್ಣಯಕ್ಕೆ ಬಂದರು. ಇಬ್ಬರೂ ಸಂಪಾದಕರಾದರು. ೂ ಬರಹಗಾರರು. ಮತ್ತೆ ಇಬ್ಬರೇ ವಾಚಕರ ಒಂದು ಸಮಿತಿ ಸೇರಿತು. "ಪತ್ರಿಕೆಗೆ 'ಚಾರುಪಾಠ' ಎಂದು ಹೆಸರಿಡಬೇಕು"—ಅಮಲನೆಂದ.

"ಬೇಡ, ಆದರ ಹೆಸರು 'ಅಮಲಾ'" ಎಂದಳು ಚಾರು.

ಈ ಹೊಸ ವ್ಯವಸ್ಥೆಯಿಂದ ಚಾರು ನಡುವಿನ ಕೆಲವು ದಿನಗಳ ದುಃಖ ವನ್ನು ಮರೆತಳು. ಅವರ ಮಾಸಿಕ ಪತ್ರಿಕೆಯಲ್ಲಿ ಸೇರಿಕೊಳ್ಳಲು ಮುಂದಾನಿಗೆ ದಾರಿಯೇ ಇಲ್ಲ. ಮತ್ತೆ ಹೊರಗಿನವರಿಗೂ ದಾರಿ ಕಟ್ಟಾಗಿದೆ.

## ೭

"ಚಾರು, ನೀನು ಬರೆಹಗಾರಳಾಗುವೆಯೆಂಬ ಕಲ್ಪನೆಯೇ ನನಗೆ ಇರಲಿಲ್ಲ!"—ಒಂದು ದಿನ ಭೂಪತಿರಾಯರು ಬಂದು ಹೇಳಿದರು.

ಚಾರು ಬೆಚ್ಚಿಬಿದ್ದಳು. ಮೈಯೆಲ್ಲ ಕಾವೇರಿತು. "ನಾನು ಲೇಖಿಕೆಯೆ! ನಿಮಗಾರು ಹೇಳಿದರು? ಇದು ಸುಳ್ಳು ಮಾತು" ಎಂದಳು ಅವಳು.

"ಕಳ್ಳನನ್ನು ಸಾಮಾನು ಸಹಿತ ಹಿಡಿದಿದ್ದೇನೆ! ಉದಾಹರಣೆ ಪ್ರತ್ಯಕ್ಷ ವಿದೆ ನೋಡು!"—ಎಂದು ರಾಯರು 'ಸರೋರುಹ'ದ ಆ ಸಂಚಿಕೆಯನ್ನು ತೆಗೆದು ತೋರಿಸಿದರು. ಚಾರು ಅದನ್ನು ನೋಡಿದಳು. ಗುಪ್ತಧನವೆಂದು ತಿಳಿದು ತನ್ನ ಕೈಬರೆಹದ ಮಾಸಿಕ ಪತ್ರಿಕೆಯಲ್ಲಿ ಸಂಚಯಮಾಡುತ್ತಿದ್ದ ಬರಹಗಳೇ ಲೇಖಿಕೆಯ ಹೆಸರಿನೊಂದಿಗೆ 'ಸರೋರುಹ'ದಲ್ಲಿ ಅಚ್ಚಾಗಿವೆ.

ಬಹಳ ಯತ್ನದಿಂದ ಪಂಜರದಲ್ಲಿಟ್ಟು ಜೋಪಾನ ಮಾಡಿದ ಹಕ್ಕಿಗಳನ್ನು ಬಾಗಿಲು ತೆರೆದು ಯಾರೋ ಒಯ್ದಂತೆ ಅವಳಿಗೆ ಭಾಸವಾಯಿತು. ತಾನು ಸಿಕ್ಕುಬಿದ್ದ ಅಪಮಾನವನ್ನು ಮರೆತಳು. ವಿಶ್ವಾಸಘಾತುಕನಾದ ಅಮಲನ ಮೇಲೆ ಮನಸ್ಸಿನಲ್ಲಿ ಬಹಳ ರೇಗಿದಳು.

"ಮತ್ತೆ ಇದನ್ನು ನೋಡು!"—ಎನ್ನುತ್ತ ಭೂಪತಿ ಚಾರುವಿನ ಮುಂದೆ 'ವಿಶ್ವಬಂಧು' ಪತ್ರಿಕೆಯನ್ನು ತೆರೆದು ಇಟ್ಟರು. 'ಈಗಿನ ಕನ್ನಡ ಲೇಖಕರ ಶೈಲಿ' ಎಂಬ ತಲೆಬರೆಹದ ಲೇಖನವಿದ್ದಿತು ಅದು.

"ಇದನ್ನು ತೆಗೆದುಕೊಂಡು ನಾನೇನು ಮಾಡಲಿ?"—ಚಾರು ಅದನ್ನು

ಕ್ಕೆಯಿಂದ ಓರೆ ಮಾಡುತ್ತ ಎಂದಳು. ಅವಳಿಗೆ ಅಮಲನ ಮೇಲೆ ಬಹಳ ಸಿಟ್ಟುಬಂದಿತು. ಅವಳ ಮನಸ್ಸು ಚಂಚಲವಾಯಿತು. "ಒಂದು ಸಲ ಓದಿ ಯಾದರೂ ನೋಡು!"—ಭೂಪತಿ ಒತ್ತಿ ಹೇಳಿದರು.

ಚಾರು ಅತ್ತ ಗಮನ ಕೊಡಲೇ ಬೇಕಾಯಿತು. ಆಧುನಿಕ ಯಾವುದೋ ಶ್ರೇಣಿಯ ಲೇಖಕರ ಭಾವಾಡಂಬರದಿಂದ ತುಂಬಿದ ಗದ್ಯವನ್ನು ನಿಂದಿಸುತ್ತ ಲೇಖಕನು ಕಟುವಾಗಿ ಟೀಕಿಸಿದ್ದ. ಆದರಲ್ಲಿಯೂ ವಿಮರ್ಶಕಾರನು ಮನ್ಮಥ ದತ್ತನ ಲೇಖನಶೈಲಿಯನ್ನು ಕುರಿತು ಬಹುವಾಗಿ ಟೀಕಿಸಿದ್ದಾನೆ; ಅದರ ಜೊತೆಗೆ ಹೋಲಿಸುತ್ತ ಹೊಸ ಬರೆಹಗಾರಳಾದ ಶ್ರೀಮತಿ ಚಾರುಬಾಲೆಯ ನೈಪುಣ್ಯವನ್ನು ಬಹಳ ಪ್ರಶಂಸಿಸಿದ್ದಾನೆ; ಭಾಷೆಯ ಅಕೃತ್ರಿಮ ಸರಳತೆ ಯನ್ನೂ ಬಿಗುವನ್ನೂ ಕುರಿತು ಹೊಗಳಿದ್ದಾನೆ. "ಇಂತಹ ಲೇಖನ ಶೈಲಿ ಯನ್ನು ಅನುಕರಿಸಿದರೆ ಸಫಲತೆ ಸಿಗಬಹುದು, ಅಮಲ-ಕಂಪನಿ ಉದ್ಧಾರ ವಾಗುವುದು. ಇಲ್ಲವಾದರೆ ಅದು ನಿಜವಾಗಿಯೂ 'ಫೇಲ್' ಆಗುವುದು. ಇದರಲ್ಲಿ ಏನೂ ಸಂದೇಹವಿಲ್ಲ" ಎಂದೂ ಬರೆದಿದ್ದಾನೆ.

"ಇದರ ಹೆಸರು ಗುರು-ಭಾರ ವಿದ್ಯೆ!"—ನಕ್ಕು ಎಂದರು ರಾಯರು.

ಚಾರುವಿಗೆ ತನ್ನ ಲೇಖನಗಳನ್ನು ಕುರಿತು ಹೊಗಳಿದಾಗ ಆನಂದವೂ ಆಯಿತು, ವ್ಯಥೆಯೂ ಆಯಿತು. ಅವಳ ಹೃದಯದಲ್ಲಿ ಆನಂದದ ಸ್ರೋತವೇ ಒಸರಲೊಲ್ಲದು. ಪ್ರಶಂಸೆಯ ಲೋಭನೀಯ ಸುಧಾಪಾತ್ರೆ ಅವಳ ಅಧರಕ್ಕೆ ತಾಕಿದ ಕೂಡಲೇ ಅವಳು ಅದನ್ನು ತಳ್ಳುತ್ತಿದ್ದಳು.

ಚಾರು ಬಗೆಬಗೆಯಾಗಿ ಮನಸ್ಸಿನೊಳಗೆ ಬಗೆದಳು:—"ಅಮಲನು ನನ್ನ ರಚನೆಗಳನ್ನು ಪತ್ರಿಕೆಗಳಿಗೆ ಕೊಟ್ಟು, ಅವು ಪ್ರಕಟವಾದ ಮೇಲೆ ಆಶ್ಚರ್ಯ ಪಡುವಂತೆ ಮಾಡಿದರಾಯಿತೆಂದು ಬಗೆದಿರಬಹುದು. ಆಗ ನನ್ನ ಸಿಟ್ಟನ್ನು ತಣ್ಣಗೆ ಮಾಡಿ ಉತ್ಸಾಹವನ್ನು ಹೆಚ್ಚಿಸಬೇಕೆಂದೂ ಯೋಚಿಸಿರಬಹುದು." ಆದರೆ ಪ್ರಶಂಸೆ ಬಂದ ಮೇಲೂ ಅವನು ಅವಳಿಗೆ ತೋರಿಸಲು ಏಕೆ ಬರಲಿಲ್ಲ? ಈ ವಿಮರ್ಶೆಯಿಂದ ಅಮಲನು ನೊಂದುಕೊಂಡಿರಬಹುದು. ಅವಳಿಗೆ ತೋರಿ ಸಲು ಅವನಿಗೆ ಮನಸ್ಸಿಲ್ಲ. ಅದಕ್ಕೆಂದೇ ಅವನು ಈ ಪತ್ರಗಳನ್ನು ಮುಚ್ಚಿಟ್ಟಿ ದ್ದಾನೆ. ಚಾರು ತನ್ನ ಮನಸ್ಸಿನ ರಂಜನೆಗೆ ಅತ್ಯಂತ ಏಕಾಂತದಲ್ಲಿ ಒಂದು ಸಾಹಿತ್ಯ-ಮಂದಿರವನ್ನು ಮಾಡಿಕೊಂಡಿದ್ದಳು. ಒಮ್ಮೆಲೇ ಪ್ರಶಂಸೆಯ ಶಿಲಾವೃಷ್ಟಿಯ ಒಂದು ದೊಡ್ಡ ಆಣೆಕಲ್ಲು ಬೀಳುತ್ತಲೇ ಅದು ಸ್ಖಲಿತವಾಗಿ

ಕೆಳಗೆ ಬೀಳುವ ಹೊತ್ತು ಬಂದಿತು. ಇದು ಚಾರುವಿನ ಮನಸ್ಸಿಗೆ ಬರಲೇ ಇಲ್ಲ.

ರಾಯರು ಹೋದರು. ಇತ್ತ ಚಾರು ತನ್ನ ಮಲಗುವ ಕೋಣೆಗೆ ಹೋಗಿ ಮಂಚದ ಮೇಲೆ ಸುಮ್ಮನೆ ಕುಳಿತುಕೊಂಡಳು. ಎದುರಿಗೆ ' ಸರೋರುಹ ' ಹಾಗೂ ' ವಿಶ್ವಬಂಧು ' ತೆರೆದು ಬಿದ್ದಿದ್ದವು.

ಅಮಲನು ಕೈಯಲ್ಲಿ ಪ್ರತಿ ಹಿಡಿದುಕೊಂಡು ಚಾರುವನ್ನು ಒಮ್ಮೆಲೇ ಗಾಬರಿಮಾಡಲು ಮೆಲ್ಲಡಿಯಿಂದ ಹಿಂದಿನಿಂದ ಪ್ರವೇಶಿಸಿದ. ಹತ್ತಿರ ಬಂದು ನೋಡುತ್ತಾನೆ, ' ವಿಶ್ವಬಂಧು 'ವಿನ ವಿಮರ್ಶೆಯನ್ನು ಎದುರಿಗೆ ಹಿಡಿದು ಕೊಂಡು ಅವಳು ತಲ್ಲೀನಳಾಗಿ ಓದುತ್ತಿದ್ದಾಳೆ.

ಅಮಲನು ಬಂದ ಹಾಗೆಯೇ ಹಿಂದಿರುಗಿ ಹೊರಗೆ ಹೋದ. ' ನನ್ನನ್ನು ನಿಂದಿಸಿ ಚಾರುವಿನ ಶೈಲಿಯನ್ನು ಪ್ರಶಂಸಿಸಿದ್ದಾರೆ. ಚಾರುವಿಗೆ ಇಷ್ಟು ಆನಂದವೆ! ಈಗ ಅವಳಿಗೆ ಇತರರು ಕಾಣುವುದೇ ಇಲ್ಲ!' ಹೀಗೆ ಇನ್ನೂ ಏನನ್ನೋ ಅವನು ಯೋಚಿಸತೊಡಗಿದ. ಅವನ ಮನಸ್ಸೆಲ್ಲ ಕ್ಷಣಮಾತ್ರ ದಲ್ಲೇ ಕಹಿಯಾಯಿತು. ಚಾರು ಒಬ್ಬ ಮೂರ್ಖನ ವಿಮರ್ಶೆಯನ್ನೋದಿ ತಾನು ಗುರುವಿಗಿಂತಲೂ ಹೆಚ್ಚೆಂದು ತಿಳಿಯತೊಡಗಿದ್ದಾಳೆ. ಇದನ್ನು ನೆನೆಸಿ ಕೊಂಡು ಅಮಲನು ಚಾರುವಿನ ಮೇಲೆ ಅತ್ಯಂತ ಕ್ರೋಧ ತಾಳಿದ. ಆ ಪತ್ರಿಕೆ ಯನ್ನು ಚಾರು ಚೂರುಚೂರಾಗುವಂತೆ ಹರಿದು ಒಲೆಗೆ ಹಾಕಿ ಸುಟ್ಟು ಬಿಡಬೇಕಾಗಿತ್ತು.

ಚಾರುವಿನ ಮೇಲೆ ಸಿಟ್ಟು ಬಂದದ್ದರಿಂದ ಅಮಲನು ಮಂದಾನ ಕೋಣೆಗೆ ಹೋಗಿ " ಮಂದಾ ಅಕ್ಕ ! " ಎಂದು ಕೂಗಿದ.

' ಬಾ ಅಮಲ. ಆಮಂತ್ರಣವಿಲ್ಲದೆಯೇ ಬಂದೆಯಲ್ಲ! ಇಂದು ನಾನು ನರಿಯ ಮೋರೆ ನೋಡಿದ ಹಾಗಿದೆ ! ' ಎಂದಳು ಅವಳು.

" ನಾನು ಒಂದೆರಡು ಹೊಸ ಬರಹ ಬರೆದಿದ್ದೇನೆ, ಕೇಳುವೆಯಾ ? "

" ಎಷ್ಟೋ ದಿನಗಳಿಂದ ' ಕೇಳುವೆಯಾ, ಕೇಳುವೆಯಾ ? ' ಎಂದು ಆಶೆ ತೋರಿಸುತ್ತ ಬಂದಿರುವೆ. ಆದರೆ ಓದಿ ಹೇಳುವುದಿಲ್ಲ. ಬೇಡಪ್ಪಾ, ಅವಳಿಗೆ ಎಲ್ಲಿಯಾದರೂ ಸಿಟ್ಟು ಬಂದರೆ ತೊಂದರೆಪಡಬೇಕಾದವನು ನೀನು. ನನಗೇನು ? " ಎಂದಳು ಮಂದಾ.

" ಯಾರು ಸಿಟ್ಟಾಗುವರು ? ಏಕೆ ಸಿಟ್ಟಾಗುವರು ? ಆಗಲಿ. ಆಗುವುದನ್ನು

ನೋಡಿದರಾಯಿತು. ನಾನು ಓದುವುದನ್ನು ಈಗಲೇ ಕೇಳುವೆಯಾ ? "— ಅಮಲನು ಸ್ವಲ್ಪ ತೀಕ್ಷ್ಣ ಸ್ವರದಲ್ಲಿ ಎಂದ.

ಮಂದಾಕಿನಿ ಅತ್ಯಂತ ಆಗ್ರಹದಿಂದ ಸಂಯತಳಾಗಿ ಕುಳಿತುಕೊಂಡಳು. ಅಮಲನು ಮಧುರ ಸ್ವರದಿಂದ ಓದತೊಡಗಿದ.

ಅಮಲನ ಲೇಖನವು ಮಂದಾಕಿನಿಗೆ ಅತಿ ನೂತನವಾಗಿ ಕಂಡಿತು. ಅವಳಿಗೆ ಅರ್ಥವೇ ಆಗಲಿಲ್ಲ. ಆದ್ದರಿಂದಲೇ ಅವಳು ಮೋರೆಯ ತುಂಬ ಆನಂದದ ನಗೆಯನ್ನು ತಂದುಕೊಂಡು ಅತಿರಿಕ್ತ ವ್ಯಗ್ರತೆಯಿಂದ ಆಲಿಸತೊಡಗಿದಳು. ಅಮಲನ ಕಂಠವು ಉತ್ಸಾಹದಿಂದ ಉತ್ತರೋತ್ತರವಾಗಿ ದೊಡ್ಡದಾಗಲಾರಂಭಿಸಿತು.

ಅಮಲನು ಓದುತ್ತಲೇ ಇದ್ದ :—" ಅಭಿಮನ್ಯು ಗರ್ಭಾವಸ್ಥೆಯಲ್ಲಿದ್ದಾಗ ವ್ಯೂಹವನ್ನು ಪ್ರವೇಶಿಸುವುದನ್ನು ಮಾತ್ರ ಕಲಿತ ; ಹೊರಗೆ ಬರುವುದನ್ನು ಕಲಿಯಲಿಲ್ಲ. ಹಾಗೆಯೇ ನದಿಯ ಪ್ರವಾಹವಾದರೂ ಗಿರಿ-ಕಂದರಗಳ ಕಲ್ಲುಮುಳ್ಳುಗಳ ಮೇಲೆ ಬಿದ್ದು ಮುಂದೆ ಹರಿಯುವುದನ್ನು ಮಾತ್ರ ಕಲಿತಿದೆ ; ಹಿಂದೆ ಹರಿಯುವುದನ್ನು ಕಲಿಯಲಿಲ್ಲ. ಅಯ್ಯೊ ನದಿಯ ಪ್ರವಾಹವೆ, ಆಯ್ಯೊ ಯೌವನವೆ, ಅಯ್ಯೊ ಕಾಲವೆ, ಆಯ್ಯೊ ಪ್ರಪಂಚವೇ, ನೀವೆಲ್ಲ ಮುಂದೆಯೇ ಸಾಗಬಲ್ಲಿರಿ—ಸ್ಮೃತಿಯ ಸ್ವರ್ಣಮಂಡಿತ ಕಲ್ಲುಗಳನ್ನು ನೀವು ಮಾರ್ಗದಲ್ಲಿ ಹರವಿಬಂದರೆ ಅಲ್ಲಿ ಅಡಿಯನ್ನೇ ಇಡುವುದಿಲ್ಲ ! ಆದರೆ ಮನುಷ್ಯನ ಮನಸ್ಸಿನದೊಂದು ವಿಚಿತ್ರಗತಿ ! ಅದು ಹಿಂದಕ್ಕೋಡುತ್ತದೆ. ಅನಂತ ಜಗತ್-ಸಂಸಾರವು ಅತ್ತ ಹೊರಳಿ ನೋಡುವುದೇ ಇಲ್ಲ !— "

ಇದೇ ಹೊತ್ತಿಗೆ ಮಂದಾಕಿನಿಯ ಕೋಣೆಯ ಬಾಗಿಲ ಹತ್ತಿರ ಒಂದು ನೆರಳು ಬಿದ್ದಿತು. ಮಂದಾಕಿನಿ ಅದನ್ನು ನೋಡಿದಳು. ನೋಡಿಯೂ ನೋಡದವಳಂತೆ ಅವಳು ಅನಿಮೇಷನೇತ್ರಗಳಿಂದ ಅಮಲನ ಮೋರೆ ನೋಡುತ್ತ ಸ್ಥಿರ ಮನೋಯೋಗದಿಂದ ಅವನ ಓದನ್ನು ಆಲಿಸುತ್ತಿದ್ದಳು.

ನೆರಳು ಆಗಲೇ ಅಲ್ಲಿಂದ ಮರೆಯಾಯಿತು.

" ಅಮಲನು ಬಂದ ಮೇಲೆ ಅವನ ಎದುರು 'ವಿಶ್ವಬಂಧು'ವಿನ ಆ ಸಂಚಿಕೆಯನ್ನು ಹಿಡಿದು ಬಾಯಿಗೆ ಬಂದ ಹಾಗೆ ಬಯ್ಯಬೇಕು. ಪ್ರತಿಜ್ಞೆಯನ್ನುಲ್ಲಂಘಿಸಿ ಅಮಲನು ಲೇಖನವನ್ನು ಬೇರೆ ಪತ್ರಿಕೆಯಲ್ಲಿ ಪ್ರಕಟಿಸಿದ್ದಾನೆ. ಆದ್ದರಿಂದ ಅವನ ಎದುರು ತನ್ನ ಸಿಟ್ಟನ್ನು ತೋರಿಸಬೇಕು " ಮುಂತಾಗಿ

ಚಾರು ಯೋಚನೆ ಹಾಕಿಕೊಂಡು ಕುಳಿತಿದ್ದಳು.

ಅಮಲನು ಬರುವ ಹೊತ್ತು ಮೀರಿತು. ಆದರೂ ಅವನ ಸುಳಿವೇ ಇಲ್ಲ. ಚಾರು ಒಂದು ಲೇಖನವನ್ನು ಬರೆದು ಅಣಿಮಾಡಿ ಇಟ್ಟಿದ್ದಾಳೆ. ಅಮಲನಿಗೆ ಓದಿ ತೋರಿಸುವ ಹಂಬಲೂ ಇದೆ. ಆ ಲೇಖನವೂ ಎದುರಿಗೆ ಬಿದ್ದಿದೆ.

ಇದೇ ಹೊತ್ತಿಗೆ ಚಾರುವಿಗೆ ಎಲ್ಲಿಂದಲೋ ಅಮಲನ ಧ್ವನಿ ಕೇಳಿಸಿತು. ಎಲ್ಲಿಂದ ? ಮಂದಾನ ಮನೆಯಿಂದ ! ಬಾಣದ ಏಟು ತಿಂದವರಂತೆ ಎದ್ದು ನಿಂತಳು ಚಾರು. ಮೆಲ್ಲಡಿಯಿಂದ ಮಂದಾನ ಬಾಗಿಲ ಬಳಿ ಹೋಗಿ ನಿಂತಳು. ಅಮಲನು ಮಂದಾಕಿನಿಗೆ ಓದಿ ಹೇಳುತ್ತಿದ್ದ ಲೇಖನವನ್ನು ಚಾರು ಈ ವರೆಗೆ ನೋಡಿರಲೇ ಇಲ್ಲ. " ಮನುಷ್ಯನ ಮನಸ್ಸು ಹಿಂದೆಯೇ ನೋಡುತ್ತಿರುತ್ತದೆ. ಆದರೆ ಅನಂತ ಜಗತ್ಸಂಸಾರವು ಅತ್ತ ಕಣ್ಣೆತ್ತಿ ಕೂಡ ನೋಡುವುದಿಲ್ಲ " —ಅಮಲನು ಓದುತ್ತಿದ್ದ.

ಮೊದಲು ಮೆಲ್ಲಡಿಯಿಂದ ಬಂದ ಚಾರು ಈಗ ಅದೇ ಗತಿಯಿಂದ ಹೋಗ ಲಾರದಾದಳು. ಇಂದು ಒಂದರ ಹಿಂದೊಂದರಂತೆ ಒಂದು–ಎರಡು–ಮೂರು ಆಘಾತಗಳು ಅವಳನ್ನು ಸಂಪೂರ್ಣ ಧೈರ್ಯಚ್ಯುತ ಮಾಡಿದ್ದವು. ಮಂದಾಕಿ ನಿಗೆ ಒಂದು ಅಕ್ಷರವನ್ನೂ ಅರ್ಥಮಾಡಿಕೊಳ್ಳುವ ಅರ್ಹತೆ ಇರಲಿಲ್ಲ. ಆದರೂ ಅಮಲನು ನಿರ್ಬೋಧ ಮೂಢನಂತೆ ಅವಳಿಗೆ ತನ್ನ ಲೇಖನವನ್ನೋದಿ ಹೇಳಿ ತೃಪ್ತನಾಗುತ್ತಿದ್ದ. ಈ ಸಂಗತಿಯನ್ನು ಗಟ್ಟಿಯಾಗಿ ಕೂಗಿ ಹೇಳಿ ಬರಲೇ ಎನಿಸಿತು ಚಾರುವಿಗೆ. ಆದರೆ ಬಾಯಿಂದ ಹೇಳುವುದಾಗಲಿಲ್ಲ. ಆದ್ದರಿಂದ ಸಿಟ್ಟಿನಿಂದ ಕಾಲಿನ ಸಪ್ಪಳ ಮಾಡಿ ಬಂದಳು. ತನ್ನ ಶಯನಗೃಹವನ್ನು ಪ್ರವೇಶಿಸಿ ಅವಳು ಗಟ್ಟಿಯಾಗಿ ಬಾಗಿಲು ಹಾಕಿಕೊಂಡಳು.

ಅಮಲನು ಕ್ಷಣ ಹೊತ್ತು ಓದುವುದನ್ನು ನಿಲ್ಲಿಸಿದ. ಮಂದಾ ನಕ್ಕು ಚಾರುವಿನ ಕಡೆಗೆ ಸನ್ನೆಮಾಡಿದಳು. ' ಅಕ್ಕನ ಸ್ವಭಾವ ಹೀಗೇಕೆ ! ತಾನು ಕೊಂಡುಕೊಂಡ ದಾಸನು ನಾನು ಎಂದು ಅವಳ ತಿಳಿವಳಿಕೆಯೆ ? ಆಕೆಯ ಹೊರತು ಮತ್ತೆ ಯಾರಿಗೂ ನಾನು ನನ್ನ ಲೇಖನಗಳನ್ನು ಓದಿ ಹೇಳಬಾರದೆ! ಇದು ಬಹಳ ಅನ್ಯಾಯ ! '—ಅಮಲನು ಹೀಗೆ ಮನಸ್ಸಿನಲ್ಲೇ ಎಂದುಕೊಂಡು ಮತ್ತಿಷ್ಟು ಗಟ್ಟಿಯಾಗಿ ಮಂದಾಕಿನಿಗೆ ಓದಿ ತೋರಿಸತೊಡಗಿದ.

ಓದುವುದು ಮುಗಿಯಿತು. ಅಮಲನು ಚಾರುವಿನ ಕೋಣೆಯ ಮುಂದೆ ಹಾಯ್ದು ಹೋದ. ಒಂದು ಸಲ ಮಾತ್ರ ಅತ್ತ ಕಣ್ಣೆತ್ತಿ ನೋಡಿದ. ಚಾರು

ಬಾಗಿಲು ಹಾಕಿಕೊಂಡಿದ್ದಳು.

ಅಮಲನು ತನ್ನ ಕೋಣೆಯ ಮುಂದೆಯೇ ಹೋಗುತ್ತಿದ್ದಾನೆಂದು ಚಾರು ಕಾಲ ಸಪ್ಪಳದಿಂದಲೇ ಊಹಿಸಿದಳು. ಅವನು ಒಮ್ಮೆಯಾದರೂ ತನ್ನ ನಡಿಗೆಯನ್ನು ನಿಲ್ಲಿಸಲಿಲ್ಲ! ಕ್ರೋಧಕ್ಷೋಭದಿಂದ ಅವಳಿಗೆ ಕಣ್ಣೀರು ಬರಲಿಲ್ಲ. ಅವಳು ತನ್ನ ಹೊಸ ಲೇಖನಗಳ ಪ್ರತಿಯನ್ನು ಕೈಯಲ್ಲಿ ತೆಗೆದುಕೊಂಡು ಒಂದೊಂದು ಹಾಳೆಯನ್ನು ಹಿಡಿದು ಎಳೆಯುತ್ತ ಹರಿದು-ಹರಿದು ರಾಶಿ ಹಾಕಿದಳು. 'ಅಯ್ಯೋ, ಯಾವ ಕುಮುಹೂರ್ತದಲ್ಲಿ ಈ ಓದು-ಬರೆಹವನ್ನಾರಂಭಿಸಿದ್ದೆನೊ!'— ಸುಯ್ಯುರೆಯುತ್ತ ಅನಳೆಂದಳು.

೮

ಸಂಜೆಯ ಸಮಯ. ಅಂಗಳದ ಹೂಗಿಡಗಳಿಂದ ಸುವಾಸನೆ ಬರುತ್ತಿತ್ತು. ಮೋಡಗಳು ಚದುರಿದ್ದವು. ಆಗಾಗ ಸ್ನಿಗ್ಧ ಪ್ರಕಾಶದಲ್ಲಿ ತಾರೆಗಳು ಕಣ್ಣಿಗೆ ಬೀಳುತ್ತಿದ್ದವು. ಇಂದು ಚಾರು ತಲೆ ಬಾಚಿಕೊಂಡಿಲ್ಲ; ಬಟ್ಟೆಗಳನ್ನೂ ಬದಲಿಸಿಲ್ಲ; ಕಿಟಿಕಿಯ ಹತ್ತಿರ ಕತ್ತಲೆಯಲ್ಲಿ ಕುಳಿತಿದ್ದಾಳೆ. ಮೃದುವಾದ ಮಂದ ಗಾಳಿ ಅವಳ ಹರಡಿದ ಕೂದಲುಗಳನ್ನು ಹಾರಾಡಿಸುತ್ತಿದೆ. ಅವಳ ಕಣ್ಣುಗಳಿಂದ ಪಟಪಟ ಕಣ್ಣೀರು ಸುರಿಯುತ್ತಿದೆ. ಅದು ಅವಳಿಗೆ ಗೊತ್ತೇ ಇಲ್ಲ.

ಆ ಹೊತ್ತಿಗೆ ಭೂಪತಿ ಕೋಣೆಯನ್ನು ಹೊಕ್ಕರು. ಅವರ ಮೋರೆ ಕಳೆಗುಂದಿತ್ತು, ಹೃದಯವು ಭಾರಾಕ್ರಾಂತವಾಗಿತ್ತು. ಇದು ಅವರು ಬರುವ ವೇಳೆಯಲ್ಲ. ಪತ್ರಿಕೆಗೆ ಬರೆಯುವುದನ್ನು ಬರೆದು, ಪ್ರೂಫ್ ತಿದ್ದಿ ಅಂತಃಪುರಕ್ಕೆ ಬರಬೇಕಾದರೆ ಅವರಿಗೆ ಬಹಳ ಹೊತ್ತು ಬೇಕಾಗುತ್ತಿತ್ತು. ಇಂದು ಹೊತ್ತು ಮುಳುಗುತ್ತಲೇ ಮನಸ್ಸನ್ನು ಹಗುರು ಮಾಡಿಕೊಳ್ಳಲು ಚಾರುವಿನ ಬಳಿಗೆ ಬಂದರು.

"ಚಾರು!" — ರಾಯರು ಸ್ವಲ್ಪ ಆಶ್ಚರ್ಯದ ಸ್ವರದಲ್ಲಿ ಕರೆದರು.

ಭೂಪತಿಯ ಧ್ವನಿಯನ್ನು ಕೇಳಿ ಚಾರು ಬೆಚ್ಚಿ ಚಟ್ಟನೆ ಎದ್ದು ಕುಳಿತಳು. ರಾಯರು ಬರುವರೆಂದು ಅವಳು ತಿಳಿದಿರಲಿಲ್ಲ. "ಕತ್ತಲೆಯಲ್ಲಿ

ಒಬ್ಬಳೇ ಕುಳಿತಿರುವೆಯಾ? ಮಂದಾ ಎಲ್ಲಿ?''—ಭೂಪತಿ ಅವಳ ಕೂದಲು ತೀಡುತ್ತಾ ಸ್ನೇಹಾರ್ದ್ರ ಕಂಠದಿಂದ ಕೇಳಿದರು.

ಚಾರುವಿನ ಆಸೆ ಇಂದು ಸ್ವಲ್ಪವೂ ನೆರವೇರಲಿಲ್ಲ. ಅಮಲನು ಬಂದು ಕ್ಷಮೆ ಕೇಳುವನೆಂದು ಅವಳು ತಿಳಿದಿದ್ದಳು. ಅದಕ್ಕಾಗಿ ಅಣಿಯಾಗಿ ನಿರೀಕ್ಷಣೆ ಮಾಡುತ್ತಿದ್ದಳು. ಅಷ್ಟರಲ್ಲಿ ಭೂಪತಿಯ ಅಪ್ರತ್ಯಾಶಿತ ಕಂಠಸ್ವರದಿಂದ ಅವಳಿಗೆ ಹೇಗೋ ಆಯಿತು. ಅವಳು ಒಮ್ಮೆಲೇ ಅಳತೊಡಗಿದಳು.

"ಚಾರು, ಏನಾಯಿತೆ?"—ಭೂಪತಿ ಗಾಬರಿಯಾಗಿ ವ್ಯಥಿತ ಹೃದಯದಿಂದ ಕೇಳಿದರು.

ಅದುದೇನು, ಹೇಳುವುದು ಕಠಿನ. ಅಂತಹ ಅದ್ಭುತ ಕಾರ್ಯವಾದರೂ ಏನಾಯಿತು? ಅಂತಹ ಘಟನೆ ಯಾವುದೂ ನಡೆಯಲಿಲ್ಲ. ಅಮಲನು ತನ್ನ ಲೇಖನವನ್ನು ಅವಳಿಗೆ ತೋರಿಸದೆ ಮಂದಾಕಿನಿಗೆ ಓದಿ ಹೇಳಿದ್ದಾನೆ. ಇದನ್ನು ಕುರಿತು ರಾಯರಿಗೆ ಹೇಗೆ ದೂರು ಹೇಳುವುದು! ಹೇಳಿದರೆ ಅವರು ನಗದಿರುವರೆ? ಈ ಚಿಕ್ಕ ಮಾತಿನ ದೂರು ಹೇಳುವ ಅವಶ್ಯಕತೆಯಾದರೂ ಎಲ್ಲಿದೆ, ಎಂಬುದನ್ನು ಹುಡುಕುವುದು ಚಾರುವಿಗೆ ಅಸಾಧ್ಯವಾಯಿತು. ಆ ಕಾರಣವಾಗಿಯೇ ಅವಳು ಇಷ್ಟು ನೊಂದುಕೊಳ್ಳುತ್ತಿದ್ದಾಳೆ. ಇದು ಅವಳಿಗೆ ಹೊಳೆಯದಿದ್ದುದರಿಂದ ಅವಳ ವೇದನೆ ಮತ್ತಿಷ್ಟು ಹೆಚ್ಚಿತು.

"ಹೇಳಬಾರದೆ ಚಾರು, ನಿನಗೇನಾಗಿದೆ? ನನ್ನ ಮೇಲೆ ನಿನಗೇನಾದರೂ ಸಿಟ್ಟೆ? ನಿನಗೆ ಗೊತ್ತೇ ಇದೆ. ನೋಡು, ಕೆಲಸ ಬೊಗಸೆಗಳಲ್ಲೇ ನನಗೆ ಸಾಕು ಸಾಕಾಗುತ್ತದೆ. ನಿನ್ನ ಮನಸ್ಸೇನಾದರೂ ನಾನು ನೋಯಿಸಿದ್ದರೆ ಅದು ನನಗೆ ತಿಳಿಯದೆ ಆಗಿರಬೇಕು'' ಎಂದರು ರಾಯರು.

ಭೂಪತಿ ಪ್ರಶ್ನಿಸುತ್ತಿದ್ದರು. ಆದರೆ ಅದಕ್ಕೆ ಚಾರುವಿನಲ್ಲಿ ಉತ್ತರವೇ ಇರಲಿಲ್ಲ. ಇದರಿಂದ ಚಾರು ಒಳಗೊಳಗೇ ಮತ್ತಿಷ್ಟು ಅಧೀರಳಾದಳು. ಈಗ ಅವರು ಇಷ್ಟಕ್ಕೇ ಬಿಟ್ಟು ಹೋದರೆ ಸಾಕಪ್ಪಾ ಎಂದು ಅವಳು ಯೋಚಿಸತೊಡಗಿದಳು.

"ಚಾರು, ಮೇಲಿಂದಮೇಲೆ ನೀನು ಇದ್ದಲ್ಲಿಗೆ ಬರಲು ನನಗಾಗುವುದಿಲ್ಲ ಇದು ನನ್ನ ತಪ್ಪು ಎಂಬುದು ನಿಜ. ಆದರೆ ಇನ್ನು ಹೀಗೆ ಮಾಡುವುದಿಲ್ಲ. ನೀನು ಬಯಸಿದಂತೆಯೇ ನಾನು ಇರುತ್ತೇನೆ.''— ಎರಡನೆಯ ಪ್ರಶ್ನೆಗೂ ಉತ್ತರ ಸಿಗದಿದ್ದುದರಿಂದ ಸ್ನೇಹಸಿಕ್ತ ಸ್ವರದಲ್ಲಿ ರಾಯರು ಎಂದರು.

ಚಾರು ಅಧೀರಳಾಗಿ "ಅದಕ್ಕಾಗಿ ಅಲ್ಲ" ಎಂದಳು

"ಹಾಗಾದರೆ ಮತ್ತೇತಕ್ಕೆ?"— ಎನ್ನುತ್ತ ರಾಯರು ಮಂಚದ ಮೇಲೆ ಕುಳಿತುಕೊಂಡರು.

ಚಾರು ವಿರಕ್ತಿಯ ಸ್ವರವನ್ನು ಮುಚ್ಚಿಡಲಾರದಾದಳು. "ಈಗ ಬೇಡ ರಾತ್ರಿ ಹೇಳುತ್ತೇನೆ" ಎಂದಳು.

ಭೂಪತಿ ಕ್ಷಣಹೊತ್ತು ಸುಮ್ಮನಿದ್ದು "ಸರಿ, ಇರಲಿ ಬಿಡು" ಎಂದರು. ಆ ಮೇಲೆ ಎದ್ದು ಮೆಲ್ಲಗೆ ಹೊರಗೆ ಹೋದರು. ಅವರೇನೋ ಹೇಳಬೇಕೆಂದಿದ್ದರು, ಆದರೆ ಹೇಳುವುದಾಗಲಿಲ್ಲ.

ಭೂಪತಿ ಒಂದು ಬಗೆಯ ಕ್ಷೋಭೆದಿಂದ ಹೊರಗೆ ಹೋದರು. ಇದು ಚಾರುವಿಗೆ ತಿಳಿಯದಿರಲಿಲ್ಲ. ಅವರನ್ನು ಕರೆಯಲೆ ಎಂದು ತೋರಿತು ಅವಳಿಗೆ. ಆದರೆ ಕರೆದು ಏನು ಹೇಳುವಳು? ಅನುತಾಪವು ಅವಳ ಎದೆಯಲ್ಲಿ ನಟ್ಟಿತ್ತು. ಪ್ರತಿಕಾರವು ಹುಡುಕಿದರೂ ಸಿಗಲಿಲ್ಲ.

ರಾತ್ರಿಯಾಯಿತು. ಇಂದು ಚಾರು ಭೂಪತಿಯ ತಟ್ಟೆಯನ್ನು ಚನ್ನಾಗಿ ಅಲಂಕರಿಸಿದ್ದಳು. ಕೈಯಲ್ಲಿ ಬೀಸಣಿಕೆಯನ್ನು ಹಿಡಿದುಕೊಂಡು ಕುಳಿತಿದ್ದಳು.

ಇಷ್ಟು ಹೊತ್ತಿಗೆ ಚಾರುವಿನ ಕಿವಿಗೆ ಮಂದಾಕಿನಿಯ ಗಟ್ಟಿಯಾದ ಧ್ವನಿಯು ಕೇಳಿಸಿತು. ಮಂದಾಕಿನಿ "ಬಿರ್‌ಜು, ಬಿರ್‌ಜು!" ಎಂದು ಆಳನ್ನು ಕೂಗುತ್ತಿದ್ದಳು. ಅವನು ಬಂದ ಮೇಲೆ "ಅಮಲ ಬಾಬು ಊಟ ಮಾಡಿದರೇನು?" ಎಂದು ಕೇಳಿದಳು.

"ಹೂಂ ತಾಯಿ, ಊಟ ಮಾಡಿದರು."

"ಊಟ ಮಾಡಿದರೆ, ಅವರಿಗೆ ಎಲೆ ಅಡಕೆಯನ್ನೇಕೆ ಕೊಡಲಿಲ್ಲ?"— ಬಿರ್‌ಜುವನ್ನು ಬಹಳವಾಗಿ ಬೆದರಿಸತೊಡಗಿದಳು ಮಂದಾಕಿನಿ.

ಇದೇ ಹೊತ್ತಿಗೆ ಭೂಪತಿ ಅಂತಃಪುರದಲ್ಲಿ ಊಟಕ್ಕೆ ಕುಳಿತಿದ್ದರು. ಚಾರು ಬೀಸಣಿಕೆ ಬೀಸುತ್ತಿದ್ದಳು.

ಚಾರು ಇಂದು ಭೂಪತಿಯ ಜೊತೆಗೆ ಪ್ರಫುಲ್ಲತೆಯಿಂದ ಸವಿಮಾತುಗಳನ್ನಾಡಬೇಕೆಂದಿದ್ದಳು. ಏನು ಮಾತನಾಡಬೇಕೆಂಬುದನ್ನು ಕೂಡ ಅವಳು ಯೋಚಿಸಿ ಅಣಿಯಾಗಿದ್ದಳು. ಆದರೆ ಮಂದಾಕಿನಿಯ ಕಂಠಸ್ವರವು ಅವಳ ವಿಸ್ತೃತ ಆಯೋಜನೆಯನ್ನು ಹಾಳುಮಾಡಿಬಿಟ್ಟಿತು. ಭೂಪತಿಗೆ ಊಟಕ್ಕೆ ಬಡಿಸುವಾಗ ಅವಳು ಒಂದು ಮಾತನ್ನೂ ಆಡಲಾರದೆ ಹೋದಳು.

ಭೂಪತಿಯೂ ಅನ್ಯಮನಸ್ಕರಾಗಿದ್ದರು. ಅವರು ಸರಿಯಾಗಿ ಊಟವನ್ನೂ ಮಾಡಲಿಲ್ಲ. "ಚನ್ನಾಗಿ ಊಟವನ್ನೆ ಮಾಡುವುದಿಲ್ಲವಲ್ಲ?"— ಎಂದು ಚಾರು ಒಮ್ಮೆ ಮಾತ್ರ ಎಂದಳು.

"ಏಕೆ, ನಾನು ಕಡಿಮೆ ಊಟ ಮಾಡಿದೆನೆ?"— ಭೂಪತಿ ಪ್ರತಿಯಾಗಿ ಕೇಳಿದರು.

"ರಾತ್ರಿ ಏನನ್ನೋ ಹೇಳುವೆನೆಂದಿದ್ದೆಯಲ್ಲ?"—ಇಬ್ಬರೂ ಮಲಗುವ ಕೋಣೆಗೆ ಹೋದ ಮೇಲೆ ರಾಯರು ಚಾರುವನ್ನು ಕೇಳಿದರು.

"ನೋಡಿ, ಹಲವು ದಿನಗಳಿಂದ ನೋಡುತ್ತಿದ್ದೇನೆ. ಮಂದಾನ ವ್ಯವಹಾರವು ನನಗೆ ಸರಿಬರುವುದಿಲ್ಲ. ಅವಳನ್ನಿಲ್ಲಿಡಲು ನನಗೆ ಧೈರ್ಯವಿಲ್ಲ."

"ಏಕೆ? ಏನಾಯಿತು?"

"ಅವಳು ಅಮಲನ ಕೂಡ ನೋಡುವವರಿಗೆ ನಾಚಿಕೆ ಬರುವಷ್ಟು ಸಲುಗೆಯಿಂದ ಇರುತ್ತಾಳೆ!"

"ಹೊ- ಹೊ- ಹಹ- ಹಹ- ನಿನಗೆ ಹುಚ್ಚೆ? ಅಮಲನಿನ್ನೂ ಹುಡುಗ. ಆ ದಿನದ—" ರಾಯರು ನಕ್ಕು ಎಂದರು.

"ಮನೆಯ ಸುದ್ದಿಯೇ ನಿಮಗೆ ಗೊತ್ತಿರುವುದಿಲ್ಲ. ಹೊರಗಿನ ಸುದ್ದಿಗಳನ್ನು ಮಾತ್ರ ಹುಡುಕುತ್ತಿರುತ್ತೀರಿ! ಏನೇ ಆಗಲಿ, ಪಾಪ ತಮ್ಮನ ವಿಷಯವಾಗಿ ನನಗೆ ಯೋಚನೆ. ಉಮಾಪತಿರಾಯರು ಯಾವಾಗ ಬಂದರು, ಯಾವಾಗ ಊಟ ಮಾಡಿದರು, ಯಾವಾಗ ಹೋದರು, ಎಂಬುದನ್ನು ಮಂದಾಕಿನಿ ನೋಡುವುದೇ ಇಲ್ಲ. ಅಮಲನಿಗೆ ಎಲೆ ಅಡಿಕೆಗೆ ಸ್ವಲ್ಪ ಸುಣ್ಣ ಕಡಿಮೆಯಾದರೆ ಸಾಕು, ಆಳುಹೋಳುಗಳನ್ನು ಬೆದರಿಸಿ ಅನರ್ಥ ಮಾಡುತ್ತಾಳೆ."

"ಹೆಣ್ಣು ಜಾತಿಯೇ ಹೀಗೆ. ನಿಮಗೆ ಸಂಶಯ ಬಹಳ. ಅದಕ್ಕೆ ಔಷಧವಿಲ್ಲ."

"ಸರಿ, ನಾವು ಹೆಣ್ಣುಮಕ್ಕಳು, ನಮ್ಮ ಸ್ವಭಾವವೇ ಹಾಗೆ. ಇಂತಹ ಅನಾಚಾರಕ್ಕೆ ನಾನು ಆಸ್ಪದ ಕೊಡುವುದಿಲ್ಲ, ನೋಡಿ ಹೇಳಿದ್ದೇನೆ!"

ಚಾರುವಿನ ತುದಿಬುಡವಿಲ್ಲದ ಈ ಸಂಶಯಕ್ಕೆ ಭೂಪತಿ ಮನಸ್ಸಿನಲ್ಲೇ ನಕ್ಕು ಆನಂದಪಟ್ಟರು. ದಾಂಪತ್ಯ ಧರ್ಮವನ್ನು ಅನುಮಾನದ ಇಲ್ಲವೆ ಕಾಲ್ಪನಿಕ ಕಲಂಕವು ಕೊಂಚವೂ ಸೋಂಕಬಾರದು. ಇದಕ್ಕಾಗಿ ಸತೀ

ಸಾಧ್ವಿಯರನ್ನು ಸಾವಧಾನದಿಂದ, ಸಂದಿಗ್ಧ ದೃಷ್ಟಿಯಿಂದ ಇಡಬೇಕು. ಇದರಲ್ಲಿಯೇ ಒಂದು ಬಗೆಯ ಮಾಧುರ್ಯವೂ ಮಹತ್ವವೂ ಇದೆ. ಇದರಿಂದಲೇ ಮನೆ ಪವಿತ್ರವಾಗುವುದು.

"ಇದನ್ನು ಕುರಿತು ಇನ್ನು ಹೊಲಿಯೆಬ್ಬಿಸಲು ಕಾರಣವಿಲ್ಲ— ಉಮಾಪತಿ ಮೈಮನ್‌ಸಿಂಗಿಗೆ ಪ್ರ್ಯಾಕ್ಟೀಸ್ ಮಾಡಲು ಹೊರಟಿದ್ದಾರೆ; ಮುಂದಾ ನನ್ನೂ ಕರೆದುಕೊಂಡು ಹೋಗುವರು"—ಭೂಪತಿ ಶ್ರದ್ಧೆ ಹಾಗೂ ಸ್ನೇಹದಿಂದ ಚಾರುವಿನ ಲಲಾಟವನ್ನು ಚುಂಬಿಸುತ್ತ ಎಂದರು.

ಕೊನೆಗೆ ಚಿಂತೆಯನ್ನೂ, ಈ ಎಲ್ಲ ಅಪ್ರಿಯ ಆಲೋಚನೆಗಳನ್ನೂ ಮರೆಮಾಚಿಕೊಳ್ಳಲು ಭೂಪತಿ ಚಾರುವಿನ ಬರಹಗಳ ಒಂದು ಪ್ರತಿಯನ್ನು ತೆಗೆದುಕೊಂಡು "ಚಾರು, ನಿನ್ನ ಬರಹಗಳನ್ನು ನನಗೆ ಓದಿ ತೋರಿಸಬಾರದೆ?" ಎಂದರು.

ಚಾರು ಆ ಪ್ರತಿಯನ್ನು ಕಸಿದುಕೊಂಡು ಹೇಳಿದಳು— "ಇದು ನಿಮ್ಮ ಮನಸ್ಸಿಗೆ ಬರುವುದಿಲ್ಲ, ಹುಡುಗಾಟಿಕೆ ಮಾಡುವಿರಿ."

ಭೂಪತಿ ಈ ಮಾತಿಗೆ ಸ್ವಲ್ಪ ನೊಂದುಕೊಂಡರು. ಆದರೆ ಅದನ್ನು ಬಚ್ಚಿಡುತ್ತ "ಇಲ್ಲ, ನಾನು ಚೇಷ್ಟೆ ಮಾಡುವುದಿಲ್ಲ. ನಾನು ಮಲಗಿರುವೆನೆಂಬ ಭ್ರಮೆ ನಿನಗಾಗುವಂತೆ ಕಿವಿಗೊಟ್ಟು ಕೇಳುವೆ" ಎಂದರು ನಗುತ್ತ.

ಆದರೆ ಭೂಪತಿ ಅವಳ ಮೇಲೆ ಪ್ರಭಾವವನ್ನು ಬೀರಲಾರದೆ ಹೋದರು ನೋಡುನೋಡುತ್ತಿರುವಾಗಲೇ ಪ್ರತಿಗಳೆಲ್ಲ ಅನೇಕ ಆವರಣಗಳಲ್ಲಿ ವಿಲೀನವಾದವು.

## ೯

ಭೂಪತಿ ಎಲ್ಲ ಮಾತುಗಳನ್ನೂ ಹೇಳಲಿಲ್ಲ. ಉಮಾಪತಿ, ಭೂಪತಿಯ ಪತ್ರಿಕೆಯ ಕಾರ್ಯಾಧ್ಯಕ್ಷರು. ಚಂದಾಹಣವನ್ನು ಎತ್ತುವುದು, ಪ್ರೆಸ್ ಹಾಗು ಪೇಟಿಯ ಕೊಡು-ತೆಗೆದುಕೊಳ್ಳುವುದನ್ನು ನೋಡಿಕೊಳ್ಳುವುದು, ಆಳುಗಳಿಗೆ ಸಂಬಳ ಕೊಡುವುದು, ಇದೆಲ್ಲ ಅವರ ಕೆಲಸ.

ಈ ಮಧ್ಯೆ ಒಮ್ಮೆಲೇ ಒಂದು ದಿನ ಕಾಗದ ವ್ಯಾಪಾರಿಯು ಪರವಾಗಿ ಅವನ

ವಕೀಲರಿಂದ ಕಾಗದ ಬಂದಿತು. ನೋಡಿ ರಾಯರು ಹೌಹಾರಿದರು. ವಕೀಲರ ಕಾಗದದ ಮೇರೆಗೆ ಭೂಪತಿ ಅವನಿಗೆ ೨೭೦೦ ರೂಪಾಯಿ ಕೊಡಬೇಕು! "ಇದೇನು! ಈ ಹಣವನ್ನೆಲ್ಲ ನಿಮ್ಮ ಕೈಯಲ್ಲಿ ಕೊಟ್ಟಿದ್ದೇನೆ! ಕಾಗದದವನಿಗೆ ಕೊಡುವುದು ನಾಲ್ಕೈದು ನೂರಕ್ಕಿಂತ ಹೆಚ್ಚಿರಲಾರದು!"—ಭೂಪತಿ ಉಮಾಪತಿರಾಯರನ್ನು ಕರೆದು ಹೇಳಿದರು.

"ಅವನು ಲೆಕ್ಕ ಮಾಡುವುದರಲ್ಲಿ ಎಲ್ಲಿಯೋ ತಪ್ಪಿದ್ದಾನೆ" ಎಂದರು ಉಮಾಪತಿರಾಯರು.

ಆದರೆ ಗುಟ್ಟು ರಟ್ಟಾಯಿತು. ಉಮಾಪತಿ ಹಲವು ದಿನಗಳಿಂದ ಹೀಗೆಯೇ ಮೋಸಮಾಡುತ್ತ ಬಂದಿದ್ದಾರೆ. ಕಾಗದದಷ್ಟೇ ಅಲ್ಲ, ಭೂಪತಿರಾಯರ ಹೆಸರಿನಿಂದ ಅವರು ಪೇಟೆಯಲ್ಲಿ ಬಹಳ ಸಾಲ ಮಾಡಿದ್ದಾರೆ. ಊರಿನಲ್ಲಿ ತಾವು ಕಟ್ಟಿಸುತ್ತಿರುವ ಮನೆಗೆ ಹೆಚ್ಚಿನ ಸಾಮಾನುಗಳನ್ನು ಭೂಪತಿಯ ಹೆಸರು ಬರೆಸಿ ತಂದಿದ್ದಾರೆ. ಕಾಗದ ತಂದ ಖಾತೆಗೂ ಬಹಳ ರೂಪಾಯಿ ಏರಿಸಿದ್ದಾರೆ.

"ನಾನೇನೂ ಓಡಿಹೋಗುವುದಿಲ್ಲ! ಕೆಲಸ ಮಾಡಿ ನಾವಕಾಶ ತೀರಿಸುತ್ತೇನೆ. ನನ್ನ ಮೇಲೆ ನಿಮ್ಮ ಒಂದು ಕವಡೆ ನಿಂತರೂ ನನ್ನ ಮೀಸೆ ಬೋಳಿಸಿರಿ."—ಗುಟ್ಟು ಪ್ರಕಟವಾದಾಗ ಎಂದರು ಉಮಾಪತಿ.

ಅವರ ಮೀಸೆ ಬೋಳಿಸಿದರೆ ರಾಯರಿಗೇನು ಸಂತೋಷವೆನಿಸುವುದೆ? ಹಣ ಹೋದುದರಿಂದ ಅವರಿಗೆ ಅಷ್ಟು ದುಃಖವಾಗಲಿಲ್ಲ. ಆದರೆ ವಿಶ್ವಾಸ ಘಾತಕ್ಕೆ ಅವರ ಮೈ ನಡುಗಿತು.

ಅಂದು ಅವರು ಅವೇಳೆಯಲ್ಲಿ ಮನೆಗೆ ಬಂದಿದ್ದರು. ಜಗತ್ತಿನಲ್ಲಿ ಅವರಿಗೆ ನಂಬುಗೆಯ ಸ್ಥಳವೆಂದರೆ ಚಾರು. ಆದರೆ ಚಾರು ತನ್ನ ದುಃಖಕ್ಕೇ ನೊಂದುಕೊಂಡು ಸಂಜೆಯ ದೀಪವನ್ನು ಹಚ್ಚದೆ ಕಿಟಕಿಯ ಹತ್ತಿರ ಕತ್ತಲೆಯಲ್ಲಿ ಕುಳಿತುಕೊಂಡಿದ್ದಳು.

ಉಮಾಪತಿ ಮರುದಿನವೇ ಮೈವ-ನ್‌ಸಿಂಗಿಗೆ ಹೋಗಲು ಅಣಿಯಾದರು. ಪೇಟೆಯ ಜನರಿಗೆ ತಿಳಿಯುವ ಮುನ್ನವೇ ಅವರು ಹಾಗೆ ಜಾರಬೇಕೆನ್ನುತ್ತಾರೆ. ಭೂಪತಿ ತಿರಸ್ಕಾರದಿಂದ ಅವರ ಕೂಡ ಮಾತನ್ನೇ ಆಡಲಿಲ್ಲ. ಭೂಪತಿಯ ಆ ಮೌನಾವಸ್ಥೆ ಉಮಾಪತಿ ತಮ್ಮ ಸೌಭಾಗ್ಯವೆಂದು ತಿಳಿದರು.

"ಮಂದಾ ಅಕ್ಕ, ಏನಾಯಿತು? ಗಂಟು ಮೂಟೆ ಕಟ್ಟುವ ಸಡಗರ

ನಡೆದಿದೆಯಲ್ಲ ? ” ಅಮಲನು ಬಂದು ಮಂದಾಕಿನಿಯನ್ನು ಕೇಳಿದ.

“ ಕಟ್ಟದಿದ್ದರೆ ಹೇಗೆ ? ಹೊರಗೆ ಹೋಗಬೇಕು ! ಯಾವಾಗಲೂ ಇಲ್ಲಿಯೆ ಇದ್ದರೆ ನಡೆಯುವುದೆ ? ” ಎಂದಳು ಮಂದಾಕಿನಿ.

“ ಎಲ್ಲಿಗೆ ಹೋಗುವಿರಿ ? ”

“ ಊರಿಗೆ.”

“ ಏಕೆ, ಇಲ್ಲಿ ಅನಾನುಕೂಲವಾಯಿತೆ ? ”

“ ನನಗೇನು ಕಷ್ಟವಿದೆ ಹೇಳು ? ನಾನೇನೋ ಸುಖವಾಗಿಯೇ ಇದ್ದೆ. ಆದರೆ ಸುಂದಿಗೆ ನನ್ನಿಂದ ಕಷ್ಟವೆನಿಸಿತು ” ಎಂದು ಅವಳು ಚಾರುವಿನ ಕೋಣೆಯತ್ತ ನೋಡಿದಳು.

ಅಮಲನು ಗಂಭೀರನಾಗಿ ಸುಮ್ಮನಾದ. “ ಛೀ ಛೀ, ಎಂತಹ ನಾಚಿಕೆ ಗೇಡಿತನದ ಮಾತಿದು ! ಗಂಡುಸರು ಏನು ತಿಳಿದುಕೊಂಡಿರಬಹುದು ? ”— ಎಂದಳು ಮಂದಾ.

ಅಮಲನು ಮುಂದೆ ಈ ವಿಷಯವನ್ನು ಚರ್ಚಿಸಲಿಲ್ಲ. ತಮ್ಮಿಬ್ಬರನ್ನು ಕುರಿತು ಅಣ್ಣನಿಗೆ ಚಾರು ಏನನ್ನೋ ಅಲ್ಲಸಲ್ಲದ ಮಾತು ಹೇಳಿರಬಹುದೆಂದು ಅಮಲನು ತಿಳಿದ.

ಅಮಲನು ಮನೆಯಿಂದ ಹೊರಗೆ ಹೋಗಿ ದಾರಿಯಲ್ಲಿ ತಿರುಗಾಡುತ್ತಿದ್ದ. ಇನ್ನು ಈ ಮನೆಯಲ್ಲಿ ಹೆಜ್ಜೆಯಿಡಬಾರದೆಂದು ತೋರಿತು ಅವನಿಗೆ. ‘ಅಣ್ಣನು ಅಕ್ಕನ ( ಅತ್ತಿಗೆಯ ) ಮಾತು ಕೇಳಿ ನನ್ನ ಮೇಲೆ ಅಪರಾಧ ಹೊರಿಸಿದರೆ ಹೇಗೆ ! ಮಂದಾಕಿನಿ ಹಿಡಿದ ದಾರಿಯನ್ನೇ ತಾನೂ ಹಿಡಿಯಬೇಕಾಗುವುದು’ ಎಂದು ಅಮಲನು ಮನಸ್ಸಿನಲ್ಲೇ ಯೋಚಿಸಿಕೊಂಡ. ಮಂದಾಕಿನಿಗೆ ಅಪ್ಪಣೆ ಕೊಡುವುದೆಂದರೆ ಅಮಲನಿಗೆ ಹೊರಡಲು ಹೇಳಿದಂತೆಯೇ ಸರಿ. ಆದರೆ ಬಾಯಿ ಬಿಟ್ಟು ಮಾತ್ರ ಹೇಳಲಿಲ್ಲ. ಆ ಮೇಲೆ ಅಮಲನ ಕೆಲಸವೇನು ಗೊತ್ತೇ ಇದೆ. ತಾನು ಒಂದು ಕ್ಷಣವೂ ಇಲ್ಲಿರುವುದು ಸಾಧ್ಯವಿಲ್ಲ. ಆದರೆ ಅಣ್ಣನು ತನ್ನ ವಿಷಯದಲ್ಲಿ ಮನಸ್ಸಿನಲ್ಲೇ ಏನಾದರೂ ಅನುಚಿತ ಅರ್ಥಮಾಡಿಕೊಂಡರೆ ? ಹಾಗಾಗಬಾರದು. ಇಷ್ಟು ದಿನಗಳಿಂದ ತನ್ನನ್ನು ಅಕ್ಕಣ್ಣ ವಿಶ್ವಾಸದಿಂದ ಮನೆಯಲ್ಲಿಟ್ಟುಕೊಂಡು ಜೋಕೆ ಮಾಡಿದ್ದಾರೆ. ತಾನು ವಿಶ್ವಾಸಘಾತ ವನ್ನೇನೂ ಮಾಡಿಲ್ಲ, ಎಂಬುದನ್ನು ಅಣ್ಣನಿಗೆ ತೋರಿಸಿಕೊಡದೆ ಹೋಗುವುದು ಸರಿಯೆ ?

ಭೂಪತಿ ಆಗ ಬಂಧು-ಬಳಗದ ಕೃತಘ್ನತನ, ಕೊಡು-ಕೊಳ್ಳುವವರ ಉಪದ್ರವ, ತಾಳ-ಮೇಳವಿಲ್ಲದ ಲೆಕ್ಕ, ಮುಂತಾದ್ದನ್ನೆಲ್ಲ ಹಣೆಯ ಮೇಲೆ ಕೈ ಇಟ್ಟುಕೊಂಡು ಕುಳಿತು ಚಿಂತಿಸುತ್ತಿದ್ದರು. ಈ ಶುಷ್ಕ ಮಾನಸಿಕ ದುಃಖದಲ್ಲಿ ಅವರಿಗೆ ಯಾರೂ ಜೊತೆಗಾರರಿಲ್ಲ. ಆ ಗಂಭೀರ ಮನೋವೇದನೆಯಿಂದ ಅವರು ಸಾಲವನ್ನೇ ಮರೆಹೋಗಲು ಸಿದ್ಧರಾಗುತ್ತಿದ್ದರು.

ಆ ಹೊತ್ತಿಗೆ ಸರಿಯಾಗಿ ಬಿರುಗಾಳಿಯಂತೆ ಅಮಲನು ಅವರ ಕೋಣೆಯನ್ನು ಪ್ರವೇಶಿಸಿದ. ಭೂಪತಿ ಒಮ್ಮೆಲೇ ತಮ್ಮ ಅಘಾಹ ಚಿಂತೆಯೊಳಗಿಂದ ಬೆಚ್ಚಿ ಬಿದ್ದು ಅವನ ಕಡೆಗೆ ನೋಡುತ್ತ "ಅಮಲ, ಮತ್ತೇನು ವಿಶೇಷ?" ಎಂದರು. ಅಮಲನು ಮತ್ತಾವುದೋ ದುಃಸಂವಾದವನ್ನು ತಂದಿರುವನೆಂದು ಅವರಿಗೆ ಒಮ್ಮೆಲೇ ತೋರಿತು.

"ಅಣ್ಣಾ, ನನ್ನ ಮೇಲೆ ಸಂಶಯ ಬರುವ ಸಂಗತಿ ಏನಾದರೂ ನಡೆಯಿತೆ?"—ಕೇಳಿದ ಅಮಲ.

"ನಿನ್ನ ಮೇಲೆ ಸಂಶಯವೆ?" ಭೂಪತಿ ಆಶ್ಚರ್ಯದಿಂದ ಎಂದರು. ಇಡಿಯ ಪ್ರಪಂಚವೇ ಅವರ ಎದುರು ಸುಳಿಯಲಾರಂಭಿಸಿತು. 'ಎಂದಾದರೊಂದು ದಿನ ಅಮಲನನ್ನೂ ಸಂಶಯ ದೃಷ್ಟಿಯಿಂದ ನೋಡಿದರೆ ಸೋಜಿಗವೇನು!' ಮುಂತಾಗಿ ರಾಯರು ಯೋಚಿಸತೊಡಗಿದರು.

"ಅಕ್ಕನು ನನ್ನ ಚರಿತ್ರೆಯನ್ನು ಕುರಿತು ಏನಾದರೂ ಹೇಳಿದಳೆ?"

"ಓಹೊ! ಈ ಸಂಗತಿಯೆ? ಇರಲಿ, ಜೀವದಲ್ಲಿ ಜೀವ ಬಂದಿತು. ಸ್ನೇಹದ ನಟನೆ. ಮಾಡುವುದು ಸರ್ವನಾಶ. ಆದರೆ ಭಯಂಕರ ಸಂಕಟ ಸಮಯದಲ್ಲಿಯೂ ಈ ಎಲ್ಲ ಕ್ಷುಲ್ಲಕ ವಿಷಯಗಳನ್ನು ಕೇಳಬೇಕಾಗುತ್ತದೆ. ಪ್ರಪಂಚವು ಒಂದು ಕಡೆಗೆ ಪೂಲನ್ನು ಹಿಡಿದು ಕೊಡಹುವುದು, ಇನ್ನೊಂದು ಕಡೆಗೆ ತನ್ನ ಸ್ವಾರ್ಥದ ಗಂಟನ್ನು ದಾಟಿಸಲು ಹಿಂದೆ ಮುಂದೆ ನೋಡದೆ ಪೂಲಿಗೆ ಕಟ್ಟೆಪ್ಪಣೆ ಮಾಡುವುದು. ಪ್ರಪಂಚದ ನಿಯಮವೇ ಹೀಗಿದೆ"—ಭೂಪತಿ ಯೋಚಿಸಿದರು.

ಮತ್ತೆ ಬೇರೆ ಹೊತ್ತಿನಲ್ಲಾಗಿದ್ದರೆ ರಾಯರು ಅಮಲನಿಗೆ ಹುಡುಗಾಟಿಕೆ ಮಾಡುತ್ತಿದ್ದರು. ಆದರೆ ಇಂದು ಅವರಿಗೆ ಆ ಉತ್ಸಾಹವಿರಲಿಲ್ಲ. "ಹುಚ್ಚು ಹಿಡಿದಿದೆಯೇನು ನಿನಗೆ?" ಎಂದರು ಅವರು.

"ಅಕ್ಕ ಏನೂ ಹೇಳಲಿಲ್ಲವೆ?"—ಅಮಲನು ಮತ್ತೆ ಕೇಳಿದ.

“ನಿನ್ನ ಬಗೆಗೆ ಅವಳಿಗೆ ಮಮತೆ ಇದೆ. ಅದಕ್ಕಾಗಿ ಅವಳು ಏನಾದರೂ ಹೇಳಿದರೆ ನೀನು ಏಕೆ ಸಿಟ್ಟಾಗಬೇಕು ? ”

“ಕೆಲಸವನ್ನು ಹುಡುಕಿಕೊಂಡು ನಾನೂ ಎಲ್ಲಿಗಾದರೂ ಹೋಗಬೇಕು. ”

“ಅಮಲ, ನೀನು ಮಾಡುತ್ತಿರುವುದು ನನಗೆ ಸರಿಬರುವುದಿಲ್ಲ. ಇನ್ನೂ ಓದು, ಕೆಲಸ ಬೊಗಸೆ ಆ ಮೇಲೆ.”—ಭೂಪತಿರಾಯರು ಮೂದಲಿಸುತ್ತ ಹೇಳಿದರು.

ಅಮಲನು ಜೋಲುಮೋರೆ ಮಾಡಿಕೊಂಡು ಅಲ್ಲಿಂದ ಹೊರಟುಹೋದ. ಇತ್ತ ಭೂಪತಿ ತಮ್ಮ ಪತ್ರಿಕೆಯ ಗ್ರಾಹಕ ರೆಜಿಸ್ಟರಿನಲ್ಲಿ ಬರೆದ ಮೂರು ವರುಷದ ಚಂದಾಹಣದ ಆಯುವ್ಯಯ ನೋಡಲು ಕುಳಿತರು.

## ೧೦

ಅಕ್ಕನನ್ನು ಕೆಣಕಬೇಕು, ಇಲ್ಲಿಗೇ ಬಿಡಬಾರದು, ಮುಂತಾಗಿ ಅಮಲನು ನಿಶ್ಚಯಿಸಿದ. ಅವನು ಮನಸ್ಸಿನಲ್ಲಿ ಅಕ್ಕನಿಗೆ ಆಡಬೇಕಾದ ಕಟು ವಚನಗಳನ್ನೂ ಯೋಚಿಸಿಕೊಂಡ.

ಮಂದಾಕಿನಿ ಹೋದ ಮೇಲೆ ಅಮಲನನ್ನು ಕರೆದು ಸಿಟ್ಟನ್ನು ತಣ್ಣಗೆ ಮಾಡಬೇಕೆಂದು ಚಾರು ಸಂಕಲ್ಪಮಾಡಿಕೊಂಡಳು. ಕರೆಸುವುದಾದರೆ ಯಾವುದೊಂದು ಲೇಖನವನ್ನು ಓದುವ ನೆವನದಿಂದ ಕರೆಸಬೇಕು. ಅಮಲನ ಒಂದು ಲೇಖನವನ್ನು ಅನುಕರಣ ಮಾಡಿಯೇ ಅವಳು ‘ಅಮಾವಾಸ್ಯೆಯ ಪ್ರಕಾಶ’ ಎಂಬ ಹೆಸರಿನ ಬರಹವನ್ನು ಬರೆದಿದ್ದಾಳೆ. ತನ್ನ ಸ್ವತಂತ್ರ ಶೈಲಿಯ ಲೇಖನವು ಅಮಲನ ಮನಸ್ಸಿಗೆ ಬರುವುದಿಲ್ಲವೆಂದು ಚಾರು ಮನಗಂಡಿದ್ದಾಳೆ.

ಹುಣ್ಣಿಮೆ ತನ್ನ ಬೆಳಕನ್ನೆಲ್ಲ ಬಯಲಿಗಿಡುತ್ತದೆ. ಅದರಂತೆ ಚಾರು ತನ್ನ ಹೊಸ ಬರೆಹದಲ್ಲಿ ಬಲ್ಲಂತೆ ಬರೆದು ನಾಚುವಂತೆ ಮಾಡಿದ್ದಾಳೆ. ಆ ಬರೆಹ ಹೀಗಿದೆ :

“ಅಮಾವಾಸ್ಯೆಯ ಅತಲ ಸ್ಪರ್ಶ್ಯ ಅಂಧಃಕಾರದಲ್ಲಿ ಷೋಡಶ ಕಲಾಪೂರ್ಣ ಚಂದ್ರನ ಪ್ರಕಾಶವು ಸ್ತರ–ಸ್ತರದಲ್ಲಿ ಅಬದ್ಧವಾಗಿ ಬಿದ್ದಿದೆ. ಆತನ ಒಂದು ಕಿರಣವೂ ವ್ಯರ್ಥವಾಗಿಲ್ಲ. ಆದ್ದರಿಂದಲೇ ಪೂರ್ಣಿಮೆಯ ಉಜ್ವಲತೆಗಿಂತ

ಅಮಾವಾಸ್ಯೆಯ ಅಂಧಃಕಾರವು ಇಷ್ಟು ಪರಿಪೂರ್ಣವಾಗಿದೆ" ಇತ್ಯಾದಿ. ಕಮಲನು ತಾನು ಬರೆದುದೆಲ್ಲವನ್ನೂ ಎಲ್ಲರಿಗೂ ಓದಿ ಹೇಳುತ್ತಾನೆ. ಆದರೆ ಚಾರು ಹಾಗೆ ಮಾಡುವುದಿಲ್ಲ. ಹುಣ್ಣಿಮೆ ಹಾಗೂ ಅಮಾವಾಸ್ಯೆಗಳನ್ನು ಹೋಲಿಸಿದರೆ ಏನು ಆಭಾಸವಾಗುತ್ತದೆ?

ಇತ್ತ ಈ ಪರಿವಾರದ ಮೂರನೆಯ ವ್ಯಕ್ತಿ ಭೂಪತಿ ಆಸನ್ನ ಋಣದ ಬಾಧೆಯಿಂದ ಬಿಡಿಸಿಕೊಳ್ಳಲು ತಮ್ಮ ಪರಮ ಮಿತ್ರ ಮೋತೀಲಾಲನ ಬಳಿಗೆ ಹೋಗಿದ್ದರು.

ಮೋತೀಲಾಲನು ಸಂಕಟದಲ್ಲಿದ್ದಾಗ ಭೂಪತಿ ಅವನಿಗೆ ಎಷ್ಟೋ ಹಣ ಸಾಲ ಕೊಟ್ಟಿದ್ದರು. ಇಂದು ಆ ಹಣವನ್ನು ಕೇಳಲು ಹೋಗಿದ್ದರು ಅವರು. ಮೋತೀಲಾಲನು ಸ್ನಾನ-ಪೂಜೆ ಮುಗಿಸಿಕೊಂಡು ತನ್ನ ಮೈಗೆ ಗಾಳಿ ಬೀಸಿಕೊಳ್ಳುತ್ತಿದ್ದ. ಎದುರಿಗೆ ಕಟ್ಟಿಗೆಯ ಪೆಟ್ಟಿಗೆಯ ಮೇಲೆ ಕಾಗದವನ್ನಿಟ್ಟುಕೊಂಡು ಅದರ ಮೇಲೆ ಚಿಕ್ಕ ಚಿಕ್ಕ ಅಕ್ಷರಗಳಿಂದ ಸಾವಿರ ಸಲ ದುರ್ಗೆಯ ಹೆಸರು ಬರೆಯುತ್ತಿದ್ದ. "ಬನ್ನಿ, ಬನ್ನಿ. ಈಚೆಗೆ ನಿಮ್ಮ ದರ್ಶನವೇ ಇಲ್ಲ!"—ರಾಯರನ್ನು ನೋಡಿ ಅತ್ಯಂತ ಸಹೃದಯತೆಯಿಂದ ಎಂದ.

"ನೀವು ಕೇಳುವುದು ಯಾವ ಹಣ? ಈಚೆಗೆ ನಿಮ್ಮಿಂದ ದುಡ್ಡು ತಂದಿರುವೆನೆ?"—ಮೋತೀಲಾಲನು ಹಣದ ಮಾತು ಕೇಳಿ ಚಿಂತಿಸುತ್ತ ಎಂದ.

ರಾಯರು ವಾರ-ತಿಥಿ ಹೇಳಿದ ಮೇಲೆ "ಸರಿ, ಅದನ್ನು ನಿಮಗೆ ಮುಟ್ಟಿಸಿ ಬಹಳ ದಿನಗಳಾದವು!" ಎಂದ.

ಭೂಪತಿಯ ದೃಷ್ಟಿಗೆ ಮೋತೀಲಾಲನ ಮೋರೆಯೇ ಬದಲಾದಂತೆ ತೋರಿತು. ಅವರಿಗೆ ನೆಲವೇ ಎದ್ದು ನಿಂತಂತಾಯಿತು. ಒಮ್ಮೆಲೇ ನೆರೆ ಬಂದಾಗ ಎತ್ತರವಿದ್ದ ಕಡೆಗೆ ಮನುಷ್ಯನು ಓಡುತ್ತಾನೆ. ಸಂಶಯಾಕ್ರಾಂತ ಬಹಿಃಸಂಸಾರದಿಂದ ಭೂಪತಿ ಅದೇ ವೇಗದಿಂದ ಅಂತಃಪುರದ ಕಡೆಗೆ ಓಡಿದರು. "ಪ್ರಪಂಚದಲ್ಲಿ ಏನೇ ಆಗಲಿ, ಚಾರು ಮಾತ್ರ ನನಗೆ ಮೋಸಮಾಡಲಾರಳು."—ಅವರು ಮನಸ್ಸಿನಲ್ಲೆ ಎಂದುಕೊಂಡರು.

ಆಗ ಚಾರು ಮಂಚದ ಮೇಲೆ ಕುಳಿತುಕೊಂಡಿದ್ದಳು. ತೊಡೆಯ ಮೇಲೆ ದಿಂಬು ಇತ್ತು. ದಿಂಬಿನ ಮೇಲೆ ಪ್ರತಿಯನ್ನಿಟ್ಟುಕೊಂಡು ಬಾಗಿ ಏನನ್ನೊ ಬರೆಯುತ್ತಿದ್ದಳು ಅವಳು. ಭೂಪತಿ ಅತಿ ಹತ್ತಿರ ಬಂದಾಗ ಅವಳಿಗೆ ಗೊತ್ತಾಯಿತು. ಅವಳು ಕೂಡಲೇ ಆ ಪ್ರತಿಯನ್ನು ತೊಡೆಯ ಬುಡದಲ್ಲಿಟ್ಟು

ಕೊಂಡು ಕುಳಿತಳು.

ಹೃದಯದಲ್ಲಿ ವ್ಯಥೆಯು ಹೊಗೆಯಾಡುತ್ತಿದ್ದಾಗ ಅತಿ ಚಿಕ್ಕ ಮಾತೂ ದೊಡ್ಡ ಪೆಟ್ಟು ಕೊಡುತ್ತದೆ. ಚಾರು ಹೀಗೆ ಅನಾವಶ್ಯಕವಾಗಿ ಪ್ರತಿಯನ್ನು ಮುಚ್ಚಿಡುವುದನ್ನು ನೋಡಿ ಭೂಪತಿಯ ಎದೆಗೆ ಕಲ್ಲು ಬಡೆದಂತಾಯಿತು.

ಭೂಪತಿ ಮೆಲ್ಲಗೆ ಚಾರುವಿನ ಮಂಚದ ಮೇಲೆ ಕುಳಿತರು. ತನ್ನ ಲೇಖನಕ್ಕೆ ಅಪ್ರತ್ಯಾಶಿತ ಅಡ್ಡಿ ಬಂದುದರಿಂದ, ತಾನು ಭೂಪತಿಯ ಕಣ್ಣು ಮುಂದೆಯೇ ಒಮ್ಮೆಲೇ ಪ್ರತಿಯನ್ನು ಮುಚ್ಚಿಡಲು ಯತ್ನಿಸಿದ್ದರಿಂದ, ಚಾರುವಿನ ಅವಸ್ಥೆ ದುರವಸ್ಥೆಯಾಯಿತು. ಅವಳ ಬಾಯಿಂದ ಮಾತೇ ಹೊರಡಲಿಲ್ಲ.

ಅಂದು ಭೂಪತಿ ಬಂದದ್ದು ಮಾತನಾಡಲೂ ಅಲ್ಲ, ಮಾತನಾಡಿಸಲೂ ಅಲ್ಲ. ಅವರು ಚಾರುವಿನ ಬಳಿ ಬರಿಗೈಯಿಂದ ಬೇಡಲು ಬಂದಿದ್ದರು. ಚಾರುವಿನಿಂದ ಪ್ರೇಮದ ಒಂದೆರಡು ಮಾತು ಹೊರಟಿದ್ದರೆ ಅವರ ಗಾಯಕ್ಕೆ ಔಷಧವಾಗುತ್ತಿತ್ತು. ಕ್ಷಣಹೊತ್ತಿನ ಅವಶ್ಯಕತೆಯನ್ನು ಪೂರೈಸಲು ಚಾರುವಿಗೆ ಪ್ರೇಮಭಂಡಾರದ ಕೀಲುಕೈ ಹುಡುಕಿದರೂ ಎಲ್ಲಿಯೂ ಸಿಗಲಿಲ್ಲ. ಇಬ್ಬರ ಕಠೋರ ಮೌನದಿಂದ ಮನೆಯ ನೀರವತೆ ಅತ್ಯಂತ ನಿಬಿಡವಾಯಿತು.

ರಾಯರು ಕೊಂಚ ಹೊತ್ತು ಸುಮ್ಮನಿದ್ದರು. ಆ ಮೇಲೆ ಒಂದು ನಿಟ್ಟುಸಿರು ಬಿಟ್ಟು ಮಂಚದಿಂದ ಎದ್ದು ಮೆಲ್ಲಮೆಲ್ಲಗೆ ಹೊರಟುಹೋದರು.

ಅದೇ ಹೊತ್ತಿಗೆ ಅಮಲನು ಕಟುವಚನಗಳ ದೊಡ್ಡ ಹೊರೆಯನ್ನು ಹೊತ್ತುಕೊಂಡು ಅವಸರದಿಂದ ಚಾರುವಿನ ಕೋಣೆಯ ಕಡೆ ಬರುತ್ತಲಿದ್ದ. ನಡುವೆಯೇ ಭೂಪತಿಯ ಜೋಲುಮೋರೆಯನ್ನು ನೋಡಿ ಉದ್ವಿಗ್ನನಾಗಿ ನಿಂತ. "ಅಣ್ಣಾ, ಆರೋಗ್ಯ ಚನ್ನಾಗಿಲ್ಲವೆ?" ಎಂದ.

ಅಮಲನ ಸ್ನಿಗ್ಧಸ್ವರವನ್ನು ಕೇಳುತ್ತಲೇ ಭೂಪತಿಯ ಹೃದಯವು ಅಶ್ರುಭಾರದಿಂದ ಒಮ್ಮೆಲೇ ಕುಸಿದುಬಿದ್ದಿತು. ತುಸು ಹೊತ್ತಿನ ವರೆಗೆ ಅವರ ಬಾಯಿಂದ ಮಾತೇ ಹೊರಡಲಿಲ್ಲ. "ಇಲ್ಲ ಅಮಲ, ಏನೂ ಇಲ್ಲ. ಈ ಸಲ ಪತ್ರಿಕೆಯಲ್ಲಿ ನಿನ್ನ ಯಾವುದಾದರೂ ಲೇಖನವು ಬರುವುದೇ?"—ಚೇತರಿಸಿಕೊಂಡು ಆರ್ದ್ರ ಕಂಠದಿಂದ ರಾಯರು ಕೇಳಿದರು.

ಅಮಲನು ಕಟು ವಚನಗಳನ್ನು ಬೇಕಾದಷ್ಟು ಸಂಗ್ರಹಿಸಿದ್ದ. ಆದರೆ ಅವೆಲ್ಲ ಎಲ್ಲಿಗೋ ಹೋದವು. "ಅಕ್ಕ, ಅಣ್ಣಗೇನಾಗಿದೆ ಹೇಳು?"—ಅವಸರದಿಂದ ಅವನು ಅಕ್ಕನ ಕೋಣೆಗೆ ಹೋಗಿ ಕೇಳಿದ.

"ಎಲ್ಲಿ? ಏನೂ ಆಗಿಲ್ಲವಲ್ಲ! ಬೇರೆ ಯಾವುದಾದರೂ ಪತ್ರಿಕೆಯು ಅವರ ಪತ್ರಿಕೆಯನ್ನು ಬಯ್ದಿರಬಹುದು" ಎಂದಳು ಚಾರು.

ಅಮಲನು ತಲೆದೂಗತೊಡಗಿದ.

ಅಮಲನು ಕರೆಕಳುಹದೆ ಬಂದ. ಸ್ವಾಭಾವಿಕ ಭಾವದಿಂದ ಮಾತ ನಾಡತೊಡಗಿದ. ಇದರಿಂದ ಚಾರುವಿಗೆ ಬಹಳ ಆನಂದವೆನಿಸಿತು. ಆಕೆ ಒಮ್ಮೆಲೇ ಬರವಣಿಗೆಯನ್ನು ಕುರಿತು ಮಾತಿಗೆ ಮೊದಲುಮಾಡಿದಳು— "ಇಂದು ನಾನು 'ಅಮಾವಾಸ್ಯೆಯ ಪ್ರಕಾಶ'ವನ್ನು ಕುರಿತು ಏನೋ ಬರೆಯುತ್ತಲಿದ್ದೆ. ಸ್ವಲ್ಪ ಹೆಚ್ಚುಕಡಿಮೆಯಾಗಿದ್ದರೆ ಅವರು ನೋಡಿಬಿಡುತ್ತಿದ್ದರು!"

ಅಮಲನು ತನ್ನ ಹೊಸ ಲೇಖನವನ್ನು ನೋಡಲು ಆಗ್ರಹ ಪಡುವನು, ಹಟ ಮಾಡುವನು, ಎಂದು ಚಾರು ಖಂಡಿತವಾಗಿಯೂ ತಿಳಿದಿದ್ದಳು. ಇದೇ ಅಭಿಪ್ರಾಯದಿಂದ ಅವಳು ತನ್ನ ಬರವಣಿಗೆಯ ಪ್ರತಿಯನ್ನು ತೆಗೆದು ಸ್ವಲ್ಪ ಆ ಕಡೆ ಈ ಕಡೆ ಮಗುಚ ಹಾಕಿದಳು. ಆದರೆ ಅಮಲನು ಒಮ್ಮೆ ತೀವ್ರ ದೃಷ್ಟಿಯಿಂದ ಅವಳ ಮೋರೆಯತ್ತ ನೋಡಿದ. ಅವನು ಏನು ತಿಳಿದನೊ, ಏನು ಯೋಚಿಸಿದನೊ, ತಿಳಿಯದು. ಬೆಚ್ಚಿಬಿದ್ದು ಎದ್ದು ಕುಳಿತ. ಪಥಿಕನು ಪರ್ವತಮಾರ್ಗದಿಂದ ಹೋಗುತ್ತ ಹೋಗುತ್ತ ಒಮ್ಮೆಲೇ ಮೇಘದ ಮುಬ್ಬು ಹರಿಯುತ್ತಲೇ ಬೆಚ್ಚಿಬಿದ್ದು ನೋಡುವಂತೆ ನೋಡಿದ. ಸಾವಿರ ಆಳು ಆಳವಾದ ಗುಂಡಿಯಲ್ಲಿ ಹೆಜ್ಜೆ ಇಡಲು ಅವನು ಹೊರಟಿದ್ದ! ಕೊನೆಗೆ ಒಂದು ತುಟಿ ಎರಡು ಮಾಡದೆಯೇ ಅಲ್ಲಿಂದ ಹೊರಗೆ ಹೋಗಿಬಿಟ್ಟ.

ಅಮಲನ ಈ ಅಭೂತಪೂರ್ವ ವ್ಯವಹಾರದ ಅರ್ಥವೇ ಚಾರುವಿಗೆ ಆಗಲಿಲ್ಲ!

## ೧೧

ಮರುದಿನ ಭೂಪತಿ ಹೊತ್ತು ತಪ್ಪಿಸಿ ಶಯನಗೃಹಕ್ಕೆ ಬಂದರು, ಚಾರುವನ್ನು ಕರೆಸಿಕೊಂಡರು.

"ಚಾರು, ಅಮಲನಿಗೆ ಒಂದು ಬೇಡಿಕೆ ಬಂದಿದೆ" ಎಂದರು ಅವರು.

ಅನನ್ಯಮನಸ್ಕಳಾಗಿದ್ದ ಚಾರು "ಏನು ಬಂದಿದೆ?" ಎಂದಳು.

" ಸಂಬಂಧ ! " ಎಂದರು ರಾಯರು.

" ಏನು, ನಾನು ಬೇಡವೆ ? "

ರಾಯರು ಗಟ್ಟಿಯಾಗಿ ನಕ್ಕರು. " ನೀನು ಇರು, ಬಿಡು. ಇದನ್ನು ನಾನು ಇನ್ನೂ ಅಮಲನನ್ನು ಕೇಳಿಲ್ಲ. ನೀನು ಮನಸ್ಸಿಗೆ ಬಂದರೂ ನಿನ್ನ ಮೇಲಿ ನನ್ನ ಅಧಿಕಾರವಿದೆಯಲ್ಲ, ಅದನ್ನು ಒಮ್ಮೆಲೇ ಹೇಗೆ ಬಿಡಲಿ ! "

" ಇಶ್, ನೀವೇನು ಹೇಳುತ್ತಿದ್ದೀರಿ ! ಅವನಿಗೆ ಕನ್ಯೆ ಬಂದಿದೆಯೆಂದು ಈಗಲಾದರೂ ಸ್ಪಷ್ಟವಾಗಿ ಹೇಳಬಾರದೆ ? ನನಗೆ ತಿಳಿಯಲೇ ಇಲ್ಲ. "

ಚಾರುವಿನ ಮೋರೆ ಕೆಂಪಡರಿತು.

" ಎಂದರೆ ಓಡುತ್ತ ನಿನಗೆ ಹೇಳಲು ಬರಲೆ ? ಏನಾದರೂ ಮೆಚ್ಚು ದೊರೆಯುವ ಆಸೆಯಂತೂ ಇರಲಿಲ್ಲ."

" ಅಮಲನಿಗೆ ಕನ್ಯೆ ಬಂದಿದೆಯೆ ? ಒಳ್ಳೆಯದೇ ಆಯಿತು. ಮತ್ತೆ ವಿಲಂಬವೇಕೆ, ನಿಶ್ಚಯ ಮಾಡಿಬಿಡಿ."

" ವರ್ಧಮಾನಿನ ವಕೀಲ್ ರಘುನಾಥ ಬಾಬುಗಳು ತಮ್ಮ ಮಗಳನ್ನು ಅಮಲನಿಗೆ ಕೊಟ್ಟು ಮದುವೆ ಮಾಡಿ ಓದಲು ಅವನನ್ನು ಇಂಗ್ಲಂಡಿಗೆ ಕಳಿಸಬೇಕೆನ್ನುತ್ತಾರೆ."

" ಇಂಗ್ಲಂಡಿಗೆ—? " ಚಾರು ಆಶ್ಚರ್ಯಚಕಿತಳಾಗಿ ಕೇಳಿದಳು.

" ಹೂಂ, ಇಂಗ್ಲಂಡಿಗೆ."

" ಅಮಲನು ಇಂಗ್ಲಂಡಿಗೆ ಹೋಗುವನೆ ? ಬಹಳ ಚನ್ನಾಯಿತು, ಒಳಿತೇ ಆಯಿತು. ನೀವು ಅವನನ್ನೊಮ್ಮೆ ಕೇಳಿ ನೋಡಿ."

" ನಾನು ಅವನಿಗೆ ಹೇಳುವ ಮುನ್ನ ನೀನು ಒಮ್ಮೆ ಅವನಿಗೆ ತಿಳಿಸಿ ವಿವರವಾಗಿ ಹೇಳಿದರೆ ಸರಿಯಾಗಲಾರದೆ ? "

" ನಾನಂತೂ ಸಾವಿರ ಸಲ ಹೇಳಿದ್ದೇನೆ. ಅವನು ನನ್ನ ಮಾತು ಕೇಳುವುದಿಲ್ಲ. ಇನ್ನು ನಾನು ಹೇಳಲಾರೆ."

" ಆತನು ಮದುವೆಯಾಗಲಿಕ್ಕಿಲ್ಲವೆಂದು ನಿನ್ನ ಅಭಿಪ್ರಾಯವೇ ? "

" ಎಷ್ಟೋ ಸಲ ಪ್ರಯತ್ನಪಟ್ಟಿದ್ದೇನೆ. ಏನು ಮಾಡಿದರೂ ಒಪ್ಪಲಿಲ್ಲ."

" ಆದರೆ ಈಗ ಸಿಕ್ಕ ಸಂದರ್ಭವನ್ನು ಕಳೆದುಕೊಂಡರೆ ಅವನಿಗೇ ತೊಂದರೆಯಾಗುವುದು. ನನ್ನ ತಲೆಯ ಮೇಲೆ ಬಹಳ ಸಾಲವಿದೆ. ನಾನು ಮೊದಲಿನಂತೆ ಆಶ್ರಯ ಕೊಡಲಾರೆ."

ಭೂಪತಿ ಅಮಲನನ್ನು ಕರೆಸಿಕೊಂಡು ಕೇಳಿದರು— "ವರ್ಧಮಾನಿನ ವಕೀಲ್ ರಘುನಾಥಬಾಬುಗಳು ತಮ್ಮ ಮಗಳನ್ನು ನಿನಗೆ ಕೊಟ್ಟು ಮದುವೆ ಮಾಡಬೇಕೆನ್ನುತ್ತಾರೆ. ಮದುವೆಯಾದಮೇಲೆ ನಿನ್ನನ್ನು ಇಂಗ್ಲಂಡಿಗೆ ಕಳಿಸ ಬೇಕೆನ್ನುತ್ತಾರೆ. ನಿನ್ನ ಅಭಿಪ್ರಾಯವೇನು ?"

"ನೀವು ಹೇಳಿದ ಹಾಗೆ. ಅದಕ್ಕೆ ನಾನು ಬೇರೆ ಮಾತು ಹೇಳುವುದಿಲ್ಲ."

ಅಮಲನ ಮಾತು ಕೇಳಿ ಇಬ್ಬರೂ ಅಚ್ಚರಿಗೊಂಡರು. ಹೇಳುತ್ತಲೇ ಅವನು ಒಪ್ಪಿಗೆಕೊಡುವನೆಂದು ಯಾರೂ ತಿಳಿದಿರಲಿಲ್ಲ. "ಅಣ್ಣನ ಅಪ್ಪಣೆ ಯಾಗುತ್ತಲೇ ಒಪ್ಪಿಗೆ ಕೊಟ್ಟ, ನೋಡಿ ಎಂತಹ ಆಜ್ಞಾಧಾರಿ ಈ ತಮ್ಮ! ಈ ಭಕ್ತಿ ಇಲ್ಲಿಯ ವರೆಗೆ ಎಲ್ಲಿಗೆ ಹೋಗಿದ್ದಿತೊ, ಕೇಳಿ."—ಚಾರು ತೀಪ್ರ ಸ್ವರದಲ್ಲಿ ಹುಡುಗಾಟಿಕೆ ಮಾಡುತ್ತ ಹೇಳಿದಳು.

ಅಮಲನು ಉತ್ತರ ಕೊಡದೆ ಸ್ವಲ್ಪ ನಗಲು ಯತ್ನಿಸಿದ.

ಅಮಲನು ಸುಮ್ಮನಿದ್ದುದನ್ನು ನೋಡಿ ಆವೇಶದಿಂದ "ಮನಸ್ಸಾಗಿವೆ ಯೆಂದು ಏಕೆ ಹೇಳುವುದಿಲ್ಲ? ಮನಸ್ಸು ಬಂದಂತೆ ಮಹಾದೇವ!" ಎಂದು ಚಾರು ಹೇಳಿದಳು.

"ಅಮಲನು ನಿನ್ನ ಸಲುವಾಗಿ ಯೊಚನೆ ಮಾಡುತ್ತಿದ್ದ. ಓರಗಿತ್ತಿಯ ಮಾತು ಕೇಳಿ ನೀನು ನೊಂದುಕೊಂಡರೆ!"—ರಾಯರು ನಗೆಯಾಡಿದರು.

ಈ ಮಾತಿಗೆ ಚಾರು ಬೆಂಕಿಯಾದಳು. 'ಇದು ಅನ್ಯಾಯದ ಮಾತು'— ಆವಳು ಗಟ್ಟಿಯಾಗಿ ಕೂಗುತ್ತ ಹೇಳಿದಳು.

"ಇದು ನೋಡು! ನನ್ನ ಹೆಂಡತಿಯ ಕೂಡ ನಾನು ಹುಡುಗಾಟಿಕೆ ಮಾಡಬಾರದೆ?"

"ಇಂತಹ ಹುಡುಗಾಟಿಕೆ ನನಗೆ ಬೇಡ."

"ಇರಲಿ, ನನ್ನಿಂದ ದೊಡ್ಡ ತಪ್ಪಾಯಿತು! ಕ್ಷಮಿಸು. ಮದುವೆ ನಿಶ್ಚಿತ ವಾಯಿತಲ್ಲವೆ?"

"ಹೂಂ"—ಎಂದ ಅಮಲ.

"ಹುಡುಗೆ ಸುರೂಪಿಯೋ ಕುರೂಪಿಯೋ ಎಂಬುದನ್ನೂ ನೋಡ ಬಾರದೆ! ನಿಮ್ಮ ಸ್ವಭಾವವೇ ಹೀಗೆ. ಅದನ್ನು ಹೇಳಲೇ ಇಲ್ಲ!" ಎಂದಳು ಚಾರು.

"ಅಮಲನು ಹುಡುಗೆಯನ್ನು ನೋಡಬೇಕೆಂದರೆ ಅದರ ವ್ಯವಸ್ಥೆ ಮಾಡ

ಬಹುದಲ್ಲ! ನಾನೂ ಕೇಳಿ ನೋಡಿದ್ದೇನೆ, ಹುಡುಗಿ ಚನ್ನಾಗಿದ್ದಾಳೆಂದು ಎಲ್ಲರೂ ಹೇಳುತ್ತಾರೆ."

"ಬೇಡ, ನೋಡುವ ಅವಶ್ಯಕತೆಯೇನೂ ಇಲ್ಲ"—ಅಮಲನೆಂದ.

"ಕೇಳಿ ಅಮಲನ ಮಾತನ್ನು! ಇದು ಸಾಧ್ಯವೆ? ಕೊನೆಯ ಪಕ್ಷಕ್ಕೆ ನಾವಾದರೂ ನೋಡಲೇ ಬೇಕು" ಎಂದಳು ಚಾರು.

"ಇಲ್ಲ ಅಣ್ಣಾ, ನೋಡುತ್ತ ಕಾಲ ತಳ್ಳುವುದು ಸರಿಯಲ್ಲವೆಂದು ನನ್ನ ತಿಳಿವಳಿಕೆ"—ಅಮಲನು ಹೇಳಿದ.

"ಈಗೇಕೆ ಅಷ್ಟು ಅವಸರ? ತಡವಾದರೆ ಜೀವ ಹಾರುವುದೆ! ಹಕ್ಕಿಯಾಗಿ ಹಾರಿ ಹೋಗುವೆಯಾ! ನಿಮ್ಮ ಸಿರಿ-ಸಂಪತ್ತು, ಧನ-ಕನಕವನ್ನು ಯಾರಾದರೂ ಹೊತ್ತುಕೊಂಡು ಹೋಗುವರೆ!" ಎಂದಳು ಚಾರು.

ಚಾರುವಿನ ಯಾವ ಹುಡುಗಾಟಿಕೆಯೂ ಅಮಲನ ಮನಸ್ಸನ್ನು ಸಡಿಲುಗೊಳಿಸಲಿಲ್ಲ.

"ಪರದೇಶಕ್ಕೆ ಹೋಗಲು ನಿನ್ನ ಮನಸ್ಸು ಹಾತೊರೆಯುತ್ತಿದೆಯಲ್ಲವೆ? ಇಲ್ಲಿ ನಿನ್ನನ್ನು ಯಾರಾದರೂ ಹೊಡೆಯುತ್ತಾರೆಯೆ, ಅಥವಾ ಕಟ್ಟಿಹಾಕುತ್ತಾರೆಯೆ? ಹ್ಯಾಟು, ಕೋಟು, ಬೂಟು ಹಾಕದೆ ಇದ್ದರೆ ಈಗಿನ ಹುಡುಗರಿಗೆ ಸಮಾಧಾನವೇ ಆಗುವುದಿಲ್ಲ! ಅಮಲ, ಇಂಗ್ಲಂಡಿನಿಂದ ಬಂದ ಮೇಲೆ ನಮ್ಮಂತಹ ಕಪ್ಪು ಜನರ ಗುರುತು ನಿನಗೆ ಸಿಗುವುದೊ ಇಲ್ಲವೊ?" ಚಾರು ಮತ್ತೆ ಎಂದಳು.

"ಎಂದರೆ ಇಂಗ್ಲಂಡಿಗೆ ಹೋಗಬೇಕೆ?" ಕೇಳಿದ ಅಮಲ.

"ಕರಿಯ ಬಣ್ಣವನ್ನು ಮರೆಯುವುದಕ್ಕಾಗಿಯೇ ಏಳು ಸಮುದ್ರದಾಟಿ ಹೋಗಬೇಕು."

"ಚಾರು, ಹೆದರುವ ಕಾರಣವೇನೂ ಇಲ್ಲ. ನಾವಂತೂ ಇದ್ದೇವಲ್ಲ, ಕರಿಜನರ ಭಕ್ತರಿಗೇನೂ ಕಡಿಮೆ ಇಲ್ಲ"—ಭೂಪತಿ ನಕ್ಕು ಹೇಳಿದರು.

ಭೂಪತಿ ಸಂತೋಷದಿಂದ ಆಗಲೇ ವರ್ಧಮಾನಿಗೆ ಕಾಗದ ಬರೆದರು. ಮದುವೆಯ ದಿನವೂ ಗೊತ್ತಾಯಿತು.

ಈ ಮಧ್ಯೆ ಪತ್ರಿಕೆಯನ್ನು ಮುಚ್ಚಿಬಿಡಬೇಕಾಯಿತು. ಆದರ ವೆಚ್ಚವನ್ನು ಭೂಪತಿರಾಯರಿಂದ ನೋಡಿಕೊಳ್ಳುವುದಾಗಲಿಲ್ಲ. ಸರ್ವಸಾಧಾರಣ ವಿಶಾಲ ನಿರ್ಮಲ ಪದಾರ್ಥದ ಸಾಧನೆಗೆ ಭೂಪತಿ ಇಷ್ಟು ದಿವಸಗಳಿಂದ ಏಕಾಗ್ರಚಿತ್ತ ದಿಂದ ತೊಡಗಿದ್ದರು. ಈಗ ಅದನ್ನು ಕ್ಷಣಮಾತ್ರದಲ್ಲಿ ಕೈಬಿಡಬೇಕಾಯಿತು. ಭೂಪತಿಯ ಜೀವನದ ಸಮಸ್ತಪ್ರಯತ್ನಗಳು ಕಳೆದ ಹನ್ನೆರಡು ವರುಷ ಗಳಿಂದ ಅಭ್ಯಸ್ತಮಾರ್ಗದಿಂದ ಅವಿಚ್ಛಿನ್ನವಾಗಿ ಪ್ರವಾಹದಲ್ಲಿ ತೇಲಿಬರುತ್ತಿದ್ದವು. ಅವು ಈಗ ಒನ್ಮೈಲೇ ಆಳವಾದ ನೀರಿನಲ್ಲಿ ಮುಳುಗಿದವು. ಇದಕ್ಕೆ ಅವರು ಕೊಂಚವೂ ಸಿದ್ಧರಿರಲಿಲ್ಲ! ವ್ಯವಹಾರಕ್ಕೆ ಅಕಸ್ಮಾತ್ತಾಗಿ ಅಡ್ಡಿ ಬಂದುದರಿಂದ ಅವರೇನು ಮಾಡಬೇಕು? ಉದ್ಯೋಗಗಳೆಲ್ಲ ಹಸಿದ ಮಗುವಿನಂತೆ ಅವರ ಮೋರೆಯನ್ನು ನಿಟ್ಟಿಸತೊಡಗಿದವು. ಅವರು ಅವನ್ನು ತಮ್ಮ ಅಂತಃಪುರದ ಕರುಣಾಮಯಿ ಸೇವಾಪರಾಯಣಳಾದ ನಾರಿಯ ಮುಂದೆ ಒಯ್ದು ನಿಲ್ಲಿಸಿದರು.

ನಾರಿ ಆಗ ಏನು ಯೋಚಿಸುತ್ತಿದ್ದಳು? ಅವಳು ಮನಸ್ಸಿನಲ್ಲಿಯೇ ಎಂದುಕೊಳ್ಳುತ್ತಿದ್ದಳು—"ಇದೆಂತಹ ಸೋಜಿಗದ ಸಂಗತಿ! ಅಮಲನ ಮದುವೆಯಾಗುವುದು; ಇದರಿಂದ ಒಳ್ಳೆಯದೇ ಆಗುವುದು! ಆದರೆ ಇಷ್ಟು ದಿನಗಳ ನಂತರ ನಮ್ಮನ್ನು ಬಿಟ್ಟು ಮುಂದಿಯ ಮನೆಯಲ್ಲಿ ಮದುವೆಯಾಗಿ ಅವನು ಇಂಗ್ಲೆಂಡಿಗೆ ಹೋಗುವನು. ಇದರಿಂದ ಅವನ ಮನಸ್ಸಿಗೆ ಸ್ವಲ್ಪವೂ ಬೇಸರವಾಗಲಿಲ್ಲ! ಇಲ್ಲಿಯ ವರೆಗೆ ನಾವು ಅವನ ಯೋಗಕ್ಷೇಮವನ್ನು ಎಷ್ಟು ಜೋಕೆಯಿಂದ ನೋಡಿಕೊಳ್ಳುತ್ತ ಬಂದಿದ್ದೇವೆ! ಅವನು ಅದನ್ನೆಲ್ಲ ಲಕ್ಷಿಸದೆ ಓಡಿಹೋಗಲು ಸ್ವಲ್ಪ ಎಡೆ ಸಿಕ್ಕ ಕೂಡಲೇ, ಅದಕ್ಕಾಗಿ ನಡುಕಟ್ಟಿಕೊಂಡು ಅಣಿಯಾಗಿದ್ದಾನೆ! ಇಷ್ಟು ದಿನಗಳ ತನಕ ಇದೇ ಯೋಚನೆಯಲ್ಲಿದ್ದನೋ ಏನೋ! ಮತ್ತೆ ಬಾಯಿಂದ ಎಷ್ಟು ಸವಿಯಾದ ಮಾತು, ಎಷ್ಟು ಪ್ರೇಮ! ಮನುಷ್ಯನ ಆಳವನ್ನು ತಿಳಿದುಕೊಳ್ಳುವುದೇ ಕಠಿನ! ಅಮಲನ ಬರೆವಣಿಗೆ ಇಷ್ಟು ಚನ್ನಾವದ್ದಾದರೂ ಅವನ ಹೃದಯವು ತುಂಬಾ ಕಠೋರವೆಂಬುದು ಯಾರಿಗೆ ತಾನೆ ತಿಳಿದಿತ್ತು!

ಚಾರು ತನ್ನ ಪರಿಪೂರ್ಣ ಹೃದಯಕ್ಕೆ ಅಮಲನ ಹೃದಯವನ್ನು ಹೋಲಿಸಿ ಅತ್ಯಂತ ತಿರಸ್ಕಾರ ಪಡಲೆತ್ನಿಸಿದಳು; ಆದರೆ ಅದು ಆಗಲಿಲ್ಲ. ಒಂದು ವೇದನೆಯು ನಿರಂತರ ಉದ್ರೇಕವು ತಪ್ತ ಶೂಲದಂತೆ ಒಳಗಿಂದೊಳಗೇ ಅವಳ ಅಭಿಮಾನವನ್ನು ಕೆರಳಿಸುತ್ತಿದ್ದಿತು.

ಅಮಲನು ನಾಳೆ ಹೊರಡುತ್ತಾನೆ. ಆದರೂ ಎಷ್ಟೋ ದಿನಗಳಿಂದ ಆತನ ದರುಶನವೇ ಇಲ್ಲ. ಅವರಿಬ್ಬರಲ್ಲಿ ನಡೆದ ಮನೋಮಾಲಿನ್ಯವನ್ನು ತೊಡೆದು ಹಾಕಲು ಕೊಂಚವೂ ಅವಕಾಶ ದೊರೆಯಲಿಲ್ಲ! 'ಅಮಲನು ಬಂದೇ ಬರುತ್ತಾನೆ. ಇಷ್ಟು ದೀರ್ಘಕಾಲದ ಆತ್ಮೀಯತೆಯನ್ನು ಅವನು ಹೀಗೆ ಒಮ್ಮೆಲೇ ಮರೆಯುವನೆ?' ಎಂದು ಚಾರು ಕ್ಷಣ ಕ್ಷಣವೂ ಯೋಚಿಸುತ್ತಿದ್ದಳು. ಆದರೆ ಅವನು ಬರಲೇ ಇಲ್ಲ. ಕೊನೆಗೆ ಅವನು ಇಂಗ್ಲಂಡಿಗೆ ಹೊರಡುವ ದಿನವು ಬಂದೇ ಬಿಟ್ಟಿತು. ಆಗ ತಾನೇ ಅಮಲನನ್ನು ಕರೆಕಳಿಸಿದಳು ಚಾರು.

"ಸ್ವಲ್ಪ ತಡೆದು ಬರುತ್ತೇನೆ"— ಅಮಲನೆಂದ.

ಚಾರು ತಮ್ಮ ವರಾಂಡದಲ್ಲಿ ಚೌಕಿಯ ಮೇಲೆ ಕುಳಿತಲ್ಲಿಯೇ ಕುಳಿತು ಬಿಟ್ಟಳು. ಬೆಳಗಿನಿಂದಲೂ ಮೋಡ ಕವಿದುದರಿಂದ ಬಹಳ ಸೆಕೆಯಾಗುತ್ತಿತ್ತು. ಅವಳು ತನ್ನ ಹರಡಿದ ಕೂದಲುಗಳನ್ನು ಸಡಿಲಾಗಿ ಸುತ್ತಿಕೊಂಡು ದಣಿವನ್ನಾರಿಸಿಕೊಳ್ಳಲು ಗಾಳಿ ಬೀಸಿಕೊಳ್ಳತೊಡಗಿದಳು.

ದೂರದಲ್ಲಿದ್ದ ಚರ್ಚಿನ ಗಡಿಯಾರವು ಡಣ್-ಡಣ್ ಹನ್ನೊಂದು ಹೊಡೆಯಿತು. ಸ್ನಾನ ಮುಂತಾದ ನಿತ್ಯಕರ್ಮಗಳನ್ನು ಮುಗಿಸಿಕೊಂಡ ಭೂಪತಿ ಇನ್ನು ಅರ್ಧಗಂಟೆಯಲ್ಲಿ ಊಟಕ್ಕೆ ಬರುತ್ತಾರೆ. ಈಗಲಾದರೂ ಅಮಲನು ಬಂದರೆ? ಹೇಗೂ ಆಗಲಿ, ಇಷ್ಟು ದಿನಗಳ ಮನೋಮಾಲಿನ್ಯವನ್ನು ಅವಳು ಇಂದು ಹೋಗಲಾಡಿಸಿಕೊಳ್ಳಬೇಕು. ಅಮಲನನ್ನು ಅವಳು ಹೀಗೇ ಕಳಿಸಲಾರಳು. ಈ ಸಮ ವಯಸ್ಕರಾದ ಮೈದುನ-ಅತ್ತಿಗೆಯರಲ್ಲಿ ಎಂದಿನಿಂದಲೂ ಮಧುರಸಂಬಂಧವು ಬೆಳೆದು ಬಂದಿದೆ. ಅದಕ್ಕೆ ಎಷ್ಟೋ ಸಲ ಅಡೆ-ತಡೆಗಳು ಬಂದಿವೆಯೆಂಬುದು ನಿಜ. ಸಿಟ್ಟು-ಸಡವು, ಪ್ರೀತಿ-ವಿಶ್ವಾಸ ಮುಂತಾಗಿ ಸ್ನೇಹದ ಹಲವು ಮುಖಗಳು ಕಾಣದೆ ಇಲ್ಲ. ಪವಿತ್ರ ಸುಖಾಲೋಚನೆಯಿಂದ ಚಿರ ಛಾಯಾಮಯ ಲತಾಕುಂಜವು ಸಿದ್ಧವಾಗಿದೆ. ಅಮಲನು ಅದನ್ನು ಇಂದು ಮಣ್ಣುಗೂಡಿಸಿ ಬಹಳ ದಿನಗಳ ವರೆಗೆ ದೂರ ಹೋಗುವನೆ? ಅದರ ಬೇರಿಗೆ ಕೊನೆಯ ಹನಿಯನ್ನೂ ಉದುರಿಸದೆ ಹೋಗುವನೆ? ಅವನಿಗೆ

ಕೊಂಚವೂ ಪಶ್ಚಾತ್ತಾಪವೆನಿಸುವುದಿಲ್ಲವೆ? ಅವರ ಬಹಳ ದಿನಗಳ ಮೈದುನ–ಅತ್ತಿಗೆಯ ಸಂಬಂಧಕ್ಕೆ ಕಣ್ಣೀರೇ ಗತಿಯೆ ?

ಅರ್ಧ ಗಂಟೆಯೂ ಮುಗಿಯುತ್ತ ಬಂದಿತು. ಸಡಿಲಾಗಿದ್ದ ಕೂದಲು ಬಿಚ್ಚಿ ಕೆಲವು ಕೂದಲು ಕೈಯಲ್ಲಿ ಹಿಡಿದುಕೊಂಡು ಚಾರು ಅವನ್ನು ಬೆರಳಿಗೆ ಸುತ್ತಿಕೊಳ್ಳುತ್ತಲೂ ಬಿಚ್ಚುತ್ತಲೂ ಇದ್ದಳು. ಎಷ್ಟು ಯತ್ನಿಸಿದರೂ ಕಣ್ಣೀರು ನಿಲ್ಲುತ್ತಿರಲಿಲ್ಲ. ಆಳು ಬಂದು "ತಾಯಿ, ರಾಯರ ಸಲುವಾಗಿ 'ಕುಶ' ತೆಗೆಯಬೇಕಾಗಿದೆ" ಎಂದ.

ಚಾರು ಸೆರಗಿನೊಳಗಿಂದ ಕೀಲುಕೈಗಳ ಗೊಂಚಲು ತೆಗೆದು ಜಣ್ಣನೆ ಆಳಿನ ಮುಂದೆ ಒಗೆದಳು. ಅವನಿಗೆ ಸೋಜಿಗವೆನಿಸಿತು. ಅವನು ಕೀಲಿನ ಕೈ ತೆಗೆದುಕೊಂಡು ಹೊರಟುಹೋದ.

ಚಾರುವಿನ ಸೀರೆಯೊಳಗಿಂದ ಯಾವುದೋ ಒಂದು ನಾಪೂನು ಎದ್ದು ಕಾಣತೊಡಗಿತು.

ಯಥಾಸಮಯಕ್ಕೆ ಭೂಪತಿ ನಗುತ್ತ ಊಟಕ್ಕೆ ಕುಳಿತುಕೊಂಡರು. ಚಾರು ಕೈಯಲ್ಲಿ ಬೀಸಣಿಕೆ ಹಿಡಿದುಕೊಂಡು ಚೌಕಿಯಲ್ಲಿ ಬಂದು ನೋಡು ವಾಗ ಅಮಲನು ಭೂಪತಿಯ ಜೊತೆಗೆ ಬಂದಿದ್ದಾನೆ. ಚಾರು ಅವನ ಮೋರೆ ಯನ್ನೇ ನೋಡಲಿಲ್ಲ.

"ಅಕ್ಕಾ, ನನ್ನನ್ನು ಕರೆದಿದ್ದೆಯಾ ?"—ಅಮಲನು ಕೇಳಿದ.

"ಇಲ್ಲ, ಈಗ ಕರೆಯಲಿಲ್ಲ" ಎಂದಳು ಚಾರು.

"ಹಾಗಾದರೆ ನಾನು ಹೋಗಬಹುದೆ? ನಾನಿನ್ನೂ ಬಹಳ ಸಾಮಾನು ಗಳನ್ನು ನೋಡಿಕೊಳ್ಳಬೇಕಾಗಿದೆ."

ಚಾರು ದೀಪ್ತದೃಷ್ಟಿಯಿಂದ ಒಮ್ಮೆ ಅಮಲನ ಮೋರೆಯನ್ನು ನೋಡಿ ದಳು "ಹೋಗು" ಎಂದಳು ತಿರಿಗಿ.

ಅಮಲನು ಚಾರುವಿನ ಮೋರೆಯತ್ತ ಒಮ್ಮೆ ನೋಡಿ ಹೊರಟುಹೋದ. ಊಟ ಮುಗಿದ ಮೇಲೆ ಭೂಪತಿ ಕೊಂಚ ಹೊತ್ತು ಚಾರುವಿನ ಬಳಿ ಕುಳಿತು ಕೊಳ್ಳುವುದು ಪದ್ಧತಿ. ಆದರೆ ಅವರು ಇಂದು ಕೊಡು–ಕೊಳ್ಳುವುದರಲ್ಲಿ, ಲೆಕ್ಕದ ತೊಡಕಿನಲ್ಲಿ, ಮುಳುಗಿದ್ದರು. ಆದ್ದರಿಂದ ಒಳಗೆ ಬಹಳ ಹೊತ್ತು ಕುಳಿತುಕೊಳ್ಳುವಂತಿರಲಿಲ್ಲ. "ಇಂದು ನಾನು ಬಹಳ ಹೊತ್ತು ಇಲ್ಲಿ ನಿಲ್ಲು ವಂತಿಲ್ಲ, ಬಹಳ ಕೆಲಸವಿದೆ" ಎಂದರು ಅವರು.

" ಹಾಗಾದರೆ ಹೋಗಬಾರದೆ ? " ಎಂದಳು ಚಾರು.

ಭೂಪತಿ ನೋಡಿದರು– ಚಾರು ಕೊಂಚ ಭಾರವಾಗಿದ್ದಾಳೆ. ಅವರು " ಈಗಲೇ ಹೋಗುವೆನೆಂದು ಇದರ ಅರ್ಥವಲ್ಲ. ತುಸು ಹೊತ್ತು ವಿಶ್ರಮಿಸಿ ಆ ಮೇಲೆ ಹೋಗುವೆ " ಎಂದರು. ಚಾರು ತುಂಬಾ ಚಿಂತೆಯಲ್ಲಿರುವಂತೆ ರಾಯರಿಗೆ ತೋರಿತು. ಅವರು ಬಹಳ ಹೊತ್ತಿನ ವರೆಗೆ ಅನುತಪ್ತ ಚಿತ್ತದಿಂದ ಕುಳಿತುಕೊಂಡಿದ್ದರು. ಆದರೆ ಮಾತನ್ನೇ ಆಡಲಿಲ್ಲ. ಮಾತನಾಡಬೇಕೆಂದು ಬಹಳ ಹೊತ್ತು ವೃಥಾ ಯತ್ನಮಾಡಿ ಕೊನೆಗೆ " ಅಮಲನಂತೂ ನಾಳೆ ಹೋಗುತ್ತಾನೆ. ನಿನಗೆ ಸ್ವಲ್ಪ ದಿನ ಮನೆ ' ಭಣ–ಭಣ ' ಎನ್ನುವುದು " ಎಂದರು.

ಚಾರು ಒಂದು ತುಟಿ ಎರಡು ಮಾಡಲಿಲ್ಲ. ಏನೋ ತರಲು ಚಟ್ಟನೆ ಎದ್ದು ಇನ್ನೊಂದು ಕೋಣೆಗೆ ಹೋದಳು. ಭೂಪತಿ ಸ್ವಲ್ಪ ಹೊತ್ತು ದಾರಿ ನೋಡಿ ಆ ಮೇಲೆ ಹೊರಗೆ ಹೋದರು.

ಚಾರು ಇಂದು ಅಮಲನ ಮೋರೆ ನೋಡಿಯೇ ತಿಳಿದುಕೊಂಡಳು: ಅಮಲನು ಈಗ ಕೊಂಚ ದಿವಸಗಳಲ್ಲಿ ಬಹಳ ಸೊರಗಿಹೋಗಿದ್ದಾನೆ; ಆತನ ಮೋರೆಯ ಮೇಲೆ ತಾರುಣ್ಯದ ಆ ಸ್ಫೂರ್ತಿ ಇಲ್ಲವೇ ಇಲ್ಲ. ಇದರಿಂದ ಚಾರುವಿಗೆ ಸಂತೋಷವೂ ಆಯಿತು, ವಿಷಾದವೂ ಆಯಿತು. ಅವನನ್ನು ಆಸನ್ನವಿಚ್ಛೇದನೆಯೇ ಒಣಗಿಸಿಬಿಟ್ಟಿದೆ ಎಂಬುದರಲ್ಲಿ ಚಾರುವಿಗೆ ಸಂದೇಹ ವಿರಲಿಲ್ಲ. ಆದರೆ ಅವನು ಹೀಗೆ ಮಾಡಿದುದೇಕೆ ? ಅವನು ಮರೆಯಲ್ಲಿಯೇ ತಿರುಗಾಡುವುದೇಕೆ ? ಅಗಲುವಾಗಲೂ ಮನಃಪೂರ್ವಕವಾಗಿ ಕಟು ವಿರೋಧಿಯೇ ಏಕೆ ಆಗಿದ್ದಾನೆ ?

ಚಾರು ಹಾಸುಗೆಯ ಮೇಲೆ ಬಿದ್ದುಕೊಂಡೇ ಯೋಚನೆ ಮಾಡುತ್ತ ಮಾಡುತ್ತ ಒಮ್ಮೆಲೆ ಎದ್ದು ಕುಳಿತಳು. ಅವಳಿಗೆ ಅಕಸ್ಮಾತ್ತಾಗಿ ಮಂದಾನ ನೆನಪು ಬಂದಿತು. ಬಹುಶಃ ಅಮಲನು ಮಂದಾಕಿನಿಯನ್ನು ಪ್ರೀತಿಸಿರಬೇಕು ! ಮಂದಾಕಿನಿ ಹೋದುದರಿಂದಲೇ ಅಮಲನು ಹೀಗೆ,.... ಛೇ ! ಅಮಲನ ಮನಸ್ಸು ಇಷ್ಟು ಕ್ಷುಲ್ಲಕವೇ ? ಇಷ್ಟು ಕ್ಷುದ್ರವೆ ? ಇಷ್ಟು ಕಲುಷಿತವೆ ? ಅವನು ವಿವಾಹಿತ ಸ್ತ್ರೀಯನ್ನು ಮೋಹಿಸುವನೆ ! ಇದು ಅಸಂಭವ ! ಅವಳು ಸಂದೇಹವನ್ನು ಮರೆಯಲು ಎಷ್ಟೋ ಯತ್ನಿಸಿದಳು. ಆದರೆ ಯತ್ನಿಸಿದಷ್ಟೂ ಅದು ಬಲವಾಯಿತು.

ಅಂತೂ ಅಮಲನು ಹೊರಡುವ ಸಮಯವೂ ಸಮೀಪಿಸಿತು. ಆದರೆ ಮೋಡಗಳು ಚದುರಲಿಲ್ಲ.

"ನಾನು ಹೋಗುತ್ತೇನೆ ಅಕ್ಕ. ಇನ್ನು ಅಣ್ಣನ ಹಿತವನ್ನು ನೋಡುವ ವಳು ನೀನೇ! ಈಗ ಅವರು ಕಷ್ಟದಲ್ಲಿದ್ದಾರೆ. ನಿನ್ನನ್ನುಳಿದು ಜಗತ್ತಿನಲ್ಲಿ ಅವರಿಗೆ ಹಿತದ ಸ್ಥಳವೇ ಇಲ್ಲ"–ಅಮಲನು ಕಂಪಿಸುವ ಕಂಠದಿಂದ ಹೇಳಿದ.

ಅಮಲನು ಭೂಪತಿಯ ಉದಾಸೀನ ಮ್ಲಾನ ಭಾವವನ್ನು ನೋಡಿ ಅವರ ಅಂತರಂಗವನ್ನು ಅರಿತುಕೊಂಡಿದ್ದ. ತಮ್ಮ ದುಃಖವನ್ನೂ, ದುರ್ದೆಸೆಯನ್ನೂ ಅಣ್ಣ ಒಬ್ಬರೆ ಸುಮ್ಮನೆ ಸಹಿಸುತ್ತಿದ್ದಾರೆ. ಯಾರ ನೆರವನ್ನೂ ಕೇಳುವುದಿಲ್ಲ. ತನಗೊದಗಿದ ಈ ಪ್ರಳಯ ಸಂಕಟಕ್ಕಾಗಿ ಆಶ್ರಿತ ಪಾಲಿತ ಆತ್ಮೀಯ ಸ್ವಜನ ರನ್ನು ವಿಚಲಿತರನ್ನಾಗಿ ಮಾಡಲಿಲ್ಲ. ಅಂತೂ ಅವನು ಭೂಪತಿಯ ಒಳ ಹೊರಗಿನ ಪರಿಸ್ಥಿತಿ ಎಲ್ಲವನ್ನೂ ಯೋಚಿಸಿ, ಆ ಮೇಲೆ ಚಾರುವಿಗೆ–"'ಆಷಾಢದ ಚಂದ್ರ' ಹಾಗೂ 'ಅಮಾವಾಸ್ಯೆಯ ಪ್ರಕಾಶ' ಗುಂಡಿಗೆ ಬೀಳಲಿ! ನಾನು ಬ್ಯಾರಿಸ್ಟರ್ ಆಗಿ ಅಣ್ಣನಿಗೆ ನೆರವಾದಾಗಲೇ ಗಂಡುಸು!" ಎಂದುಕೊಂಡ.

ಚಾರು ಹಿಂದಿನ ಇರುಳೆಲ್ಲ ಎಚ್ಚರವಾಗಿದ್ದು ಯೋಚಿಸಿಕೊಂಡಿದ್ದಳು. ಅಮಲನು ಹೋಗುವಾಗ ಹೇಳಬೇಕಾದ ಶಬ್ದಗಳನ್ನು ಅವಳು ಸಹಾಸ್ಯ-ಅಭಿಮಾನದಿಂದ ಹಾಗೂ ಪ್ರಸನ್ನ ಉಪೇಕ್ಷೆಯಿಂದ ತೂಗಿ-ತೂಗಿ ಮನಸ್ಸಿನೊಳಗೆ ಹೊಂದಿಸಿಕೊಂಡಿದ್ದಳು. ಆದರೆ ಬೀಳ್ಕೊಡುವಾಗ ಚಾರುವಿನ ಬಾಯಿಂದ ಶಬ್ದಗಳೇ ಹೊರಬೀಳಲಿಲ್ಲ— "ಕಾಗದ ಬರೆಯುತ್ತಿರು" ಎಂದು ಮಾತ್ರ ಹೇಳಿದಳು.

ಅಮಲನು ನೆಲಮುಟ್ಟಿ ನಮಸ್ಕಾರ ಮಾಡಿದ. ಚಾರು ತನ್ನ ಕೋಣೆಗೆ ಓಡಿಹೋಗಿ ಒಳಗಿನಿಂದ ಬಾಗಿಲು ಹಾಕಿಕೊಂಡಳು.

೧೩

ಭೂಪತಿ ವರ್ಧಮಾನಕ್ಕೆ ಹೋಗಿ ಅಮಲನ ತಲೆಯ ಮೇಲೆ ಅಕ್ಕಿಕಾಳು ಹಾಕಿದರು; ಆ ಮೇಲೆ ಅವನನ್ನು ಇಂಗ್ಲಂಡಿಗೆ ಕಳಿಸಿ ತಾವು ಊರಿಗೆ ಬಂದರು.

ಸುತ್ತಾ ಕಡೆಯಿಂದ ಬೀಳುತ್ತಿರುವ ಪೆಟ್ಟುಗಳಿಗೆ ಬೆನ್ನು ಕೊಟ್ಟುಕೊಟ್ಟು ಭೂಪತಿಯ ಮನಸ್ಸಿನಲ್ಲಿ ಒಂದು ಬಗೆಯ ವೈರಾಗ್ಯವೃತ್ತಿ ಹುಟ್ಟಿತ್ತು. ಸಭೆ ಸಮಿತಿಗಳಿಗೆ ಹೋಗುವುದು, ಬರುವುದು, ಯಾವುದೂ ಅವರಿಗೆ ಇಷ್ಟವಿಲ್ಲ. 'ನನ್ನ ವಿಪತ್ತಿಗೆ ನಾನೇ ಕಾರಣ. ಜೀವನದ ಸುಖದ ದಿನಗಳು ವ್ಯರ್ಥವಾಗಿ ಸಂದು ಹೋದವು. ಜೀವನದ ಸಾರಭಾಗವು ನಿಸ್ಸಾರವಾಗಿ ಕಳೆದುಹೋಯಿತು' ಎಂದು ಅವರು ಯೋಚಿಸುತ್ತಿದ್ದರು.

ಭೂಪತಿ ತಾವೇ ಎಂದುಕೊಳ್ಳುತ್ತಿದ್ದರು–'ಹೋಗಲಿ, ಪತ್ರಿಕೆ ಬಂದಾಗುವುದು ಒಳ್ಳೆಯದೇ ಆಯಿತು. ಅದರಿಂದ ನಾನು ತಲೆ ತೊಳೆದುಕೊಂಡ ಹಾಗಾಯಿತು. ಹೊತ್ತು ಮುಳುಗಿ ಕತ್ತಲೆ ಕವಿಯುವ ಲಕ್ಷಣವು ಕಂಡುಬಂದಾಗ ಪಕ್ಷಿ ತನ್ನ ಗೂಡಿಗೆ ಮರಳುವಂತೆಯೇ ನಾನೂ ಬಹಳ ದಿನಗಳ ಸಂಚರಣ ಕ್ಷೇತ್ರವನ್ನು ತ್ಯಜಿಸಿ ಅಂತಃಪುರಕ್ಕೆ ಚಾರುವಿನ ಬಳಿಗೆ ಹೋಗುತ್ತಿದ್ದೇನೆ. ಇನ್ನು ನಾನು ಎಲ್ಲಿಗೂ ಹೋಗುವುದಿಲ್ಲ. ಇದೇ ನನ್ನ ಜೀವನಾಧಾರ. ನಾನು ವರ್ತಮಾನ ಪತ್ರಿಕೆಯ ಹಡಗನ್ನು ಹಗಲಿರುಳೂ ನಡೆಸುತ್ತಿದ್ದೆ. ಆದರೆ ಅದು ಮುಳುಗಿತು. ಇನ್ನು ನನಗೆ ಮನೆಯೇ ಗತಿ.'

ಭೂಪತಿಯ ಮನಸ್ಸಿನಲ್ಲಿ 'ಸ್ತ್ರೀಯು ಯಾರ ತೊತ್ತೂ ಅಲ್ಲ. ಅವಳು ಧ್ರುವತಾರೆಯಂತೆ ತನ್ನ ಪ್ರದೀಪವನ್ನು ತಾನೇ ಹೊತ್ತಿಸುತ್ತಾಳೆ. ಅದು ಗಾಳಿಯ ಆಘಾತಕ್ಕೆ ಆರುವುದಿಲ್ಲ, ಎಣ್ಣೆಯನ್ನು ಲಕ್ಷಿಸುವುದಿಲ್ಲ' ಎಂಬ ಒಂದು ಸಂಸ್ಕಾರವು ಮನೆಮಾಡಿತ್ತು. ಆದರೆ ಹೊರಗೆ ಅವ್ಯವಸ್ಥೆ ಆರಂಭವಾಯಿತು. ಒಳಗೆ ಅಂತಃಪುರದಲ್ಲಿಯೂ ಕಂಟಕ ಬಿದ್ದಿತ್ತು. ಇದು ಅವರಿಗೆ ತಿಳಿದಿದ್ದರೆ ಸರಿಯಾಗಿ ಪರೀಕ್ಷಿಸುತ್ತಿದ್ದರು.

ಭೂಪತಿ ಸಂಜೆಗೆ ವರ್ತಮಾನಿನಿಂದ ಬಂದರು. ಕೂಡಲೆ ಕೈ ಕಾಲು ತೊಳೆದುಕೊಂಡು ಬೇಗನೇ ಊಟ ಮುಗಿಸಿದರು. ಚಾರು ಅಮಲನ ವಿವಾಹದ ವೃತ್ತಾಂತವನ್ನೂ, ಅವನು ಇಂಗ್ಲಂಡಿಗೆ ಹೋದುದನ್ನೂ ಆದ್ಯೋಪಾಂತ ಕೇಳಲು ಉತ್ಸುಕಳಿರುವಳೆಂದು ತಿಳಿದು ರಾಯರು ಇಂದು ಕೊಂಚವೂ ಹೊತ್ತು ಕಳೆಯಲಿಲ್ಲ. ನೇರವಾಗಿ ಮಲಗುವ ಕೋಣೆಗೆ ಹೋಗಿ ಹಾಸುಗೆಯ ಮೇಲೆ ಒರಗಿಕೊಂಡರು. ಹಾಗೆಯೇ ಬಾಯೊಳಗಿಂದ ಹೊಗೆಬಿಡತೊಡಗಿದರು. ಆದರೂ ಚಾರು ಬರಲಿಲ್ಲ. ಬಹುಶಃ ಮನೆಯ ಕೆಲಸ ಬೊಗಸೆಯಲ್ಲಿ ತೊಡಗಿರಬಹುದು. ಹೊಗೆಸೊಪ್ಪು ಪೂರ್ಣ ಸುಟ್ಟುಹೋದ ಮೇಲೆ ಭೂಪತಿಗೆ ನಿದ್ದೆ ಬಂದಿತು.

ಜೊಂಪು ಇಳಿದಾಗೊಮ್ಮೆ ಅವರು ಬೆಚ್ಚಿ ಬಿದ್ದು ಎದ್ದು ಕುಳಿತುಕೊಳ್ಳು ತ್ತಿದ್ದರು. ‘ ಇಷ್ಟು ಹೊತ್ತಾದರೂ ಚಾರು ಏಕೆ ಬರಲಿಲ್ಲ ? ’—ಎಂದು ಅವರು ಯೋಚಿಸತೊಡಗಿದರು. ಕೊನೆಗೆ ಅವರಿಗೆ ತಡೆಯುವುದಾಗಲಿಲ್ಲ. ಆಗ ಚಾರು ವನ್ನು ಕರೆಕಳಿಸಿದರು. ಅವಳು ಬಂದ ಮೇಲೆ “ ಚಾರು. ಇಂದು ಇಷ್ಟೇಕೆ ಹೊತ್ತು ಮಾಡಿದೆ ? ” ಎಂದು ಕೇಳಿದರು.

“ ಹೌದು, ಇಂದು ಹೊತ್ತಾಯಿತು ” ಎಂದು ಉತ್ತರ ಕೊಟ್ಟಳು ಚಾರು.

ಚಾರು ಆಗ್ರಹಪೂರ್ಣ ಪ್ರಶ್ನೆ ಮಾಡುವಳೆಂದು ಭೂಪತಿ ನಿರೀಕ್ಷಿಸುತ್ತಿದ್ದರು. ಆದರೆ ಅವಳು ಏನನ್ನೂ ಕೇಳಲಿಲ್ಲ. ಇದರಿಂದ ರಾಯರು ಸ್ವಲ್ಪ ನೊಂದು ಕೊಂಡರು. ಎಂದರೆ, ಚಾರು ಮತ್ತು ಅಮಲರಲ್ಲಿ ಸ್ನೇಹವಿರಲಿಲ್ಲವೆ ? ಅಮ ಲನು ಇಲ್ಲಿರುವ ವರೆಗೆ ಚಾರು ಬೇಕಾದ ಹಾಗೆ ನಗುತ್ತ ಕೆಲೆಯುತ್ತ ಇದ್ದಳು. ಅವನು ಅತ್ತ ಹೋಗುತ್ತಲೇ ಅವನ ಬಗೆಗೆ ಈ ಉದಾಸೀನತೆ ! ಇಂತಹ ವಿಪರೀತ ವ್ಯವಹಾರದಿಂದ ಭೂಪತಿಯ ಮನಸ್ಸಿಗೆ ಹುಳು ಕಚ್ಚಿದಂತೆ ಎನಿಸಿತು. “ ಎಂದರೇನು, ಚಾರುವಿನ ಹೃದಯವು ವಿಶಾಲವಲ್ಲವೆ ? ಅವಳಿಗೆ ನಗುವುದು, ಆಡುವುದಷ್ಟೇ ಗೊತ್ತೆ ? ಅವಳು ಸ್ನೇಹ ಪ್ರೇಮಗಳನ್ನು ಅರಿಯಳೆ ? ಸ್ತ್ರೀಯರಿಗೆ ಇಂತಹ ಅನಾಸಕ್ತ ಭಾವವು ಶೋಭಿಸುವುದಿಲ್ಲ ! ” —ಅವರು ಯೋಚಿಸತೊಡಗಿದರು.

ಚಾರು ಮತ್ತು ಅಮಲರ ಸ್ನೇಹವನ್ನು ನೋಡಿ ಭೂಪತಿರಾಯರು ಹಿರಿಹಿರಿ ಹಿಗ್ಗುತ್ತಿದ್ದರು. ಇವರಿಬ್ಬರ ಆಟಪಾಟಗಳನ್ನು ನೋಡಿ ನಲಿಯುತ್ತಿದ್ದರು. ಚಾರು ಯಾವಾಗಲೂ ಅಮಲನ ಕ್ಷೇಮಚಿಂತನೆಯಲ್ಲಿರುತ್ತಿದ್ದಳು. ಇದನ್ನು ನೋಡಿ ರಾಯರು ಮನಸ್ಸಿನಲ್ಲಿಯೇ ಆನಂದಪಡುತ್ತಿದ್ದರು.

ಆದರೆ ಇಂದು ರಾಯರು ಯೋಚಿಸತೊಡಗಿದರು :—‘ ಇದೆಲ್ಲ ತೋರಿಕೆಯೆ? ಚಾರುವಿನ ಹೃದಯದಲ್ಲಿ ಅವನಿಗೆಲ್ಲಿಯೂ ಸ್ಥಳವಿರಲಿಲ್ಲವೆ ? ಅವಳಿಗೆ ಹೃದಯವೇ ಇರಲಿಲ್ಲವೆಂದ ಮೇಲೆ ನನ್ನ ಗತಿ ಏನು ?’ ಎಂದು.

“ ಚಾರು, ನೀನು ಚನ್ನಾಗಿದ್ದಿಯಾ ? ಆರೋಗ್ಯವೇನೂ ಕೆಟ್ಟಿಲ್ಲವಷ್ಟೆ?” ಪರೀಕ್ಷಿಸಲೋಸುಗ ಭೂಪತಿ ಮೆಲ್ಲಗೆ ಕೇಳಿದರು.

“ ಚನ್ನಾಗಿದೆ ”— ಚಾರು ಸಂಕ್ಷೇಪವಾಗಿ ಉತ್ತರವಿತ್ತಳು.

ಭೂಪತಿ “ ಅಮಲನ ಮದುವೆಯಾಯಿತು ” ಎಂದು ಸುಮ್ಮನಾದರು. ಚಾರು ತತ್ಕಾಲೋಚಿತ ಸಂಗತ ಮಾತನ್ನು ಹೇಳಲೆತ್ನಿಸಿದಳು. ಆದರೆ ಅವಳ

ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಅವಳು ಜಡವಸ್ತುವಿನಂತೆ ಸುಮ್ಮನಿದ್ದಳು.

ಭೂಪತಿ ಏನನ್ನೂ ಮನಸ್ಸಿಟ್ಟು ನೋಡುವುದಿಲ್ಲ. ಆದರೆ ಅಮಲನನ್ನು ಬೀಳ್ಕೊಟ್ಟ ಶೋಕವು ಅವರ ಮನಸ್ಸಿನಲ್ಲಿ ಬೇರೂರಿತ್ತು. ಆದ್ದರಿಂದಲೇ ಚಾರುವಿನ ಉದಾಸೀನತೆಯಿಂದ ಅವರಿಗೆ ವ್ಯಥೆಯಾಯಿತು. ಸಮವೇದನೆಯಿಂದ ನೊಂದ ಚಾರುವಿನೊಂದಿಗೆ ಅಮಲನನ್ನು ಕುರಿತು ಮಾತನಾಡಿ ಹೃದಯವನ್ನು ಹಗುರು ಮಾಡಿಕೊಳ್ಳಬೇಕೆಂದು ರಾಯರು ಬಗೆದಿದ್ದರು.

ಅವರು—"ನೋಡಲು ಹುಡುಗ ಬಹಳ ಚೆಲುವ. ಚಾರು, ಏಕೆ, ನಿದ್ದೆ ಬಂದಿತೇನು?" ಎಂದರು.

"ಇಲ್ಲ."

"ಪಾಪ, ಅಮಲನೊಬ್ಬನೇ ಹೋದ. ಆತನು ರೈಲು ಹತ್ತಿದ ಮೇಲೆ ಮಗುವಿನಂತೆ ಅಳತೊಡಗಿದ. ನನಗೂ, ಎಷ್ಟು ಯತ್ನಿಸಿದರೂ ಕಣ್ಣೀರು ತಡೆದುಕೊಳ್ಳುವುದಾಗಲಿಲ್ಲ. ಅದೇ ಡಬ್ಬದಲ್ಲಿ ಇಬ್ಬರು ಆಂಗ್ಲರು ಕುಳಿತಿದ್ದರು. ಗಂಡಸರು ಅಳುವುದನ್ನು ನೋಡಿ ಅವರಿಗೆ ಮೋಜೆನಿಸಿತು!"

ಚಾರು ದೀಪವನ್ನು ಚಿಕ್ಕದು ಮಾಡಿ ಅರೆಬೆಳಕಿನಲ್ಲಿ ಮಂಚದ ಮೇಲೆ ಹೊರಳಾಡುತ್ತಿದ್ದಳು. ಆ ಮೇಲೆ ಒಮ್ಮೆಲೇ ಹಾಸುಗೆಯಿಂದೆದ್ದು ಹೊರಟು ಹೋದಳು. ಆಗ ಭೂಪತಿ ಗಾಬರಿಯಿಂದ ಕೇಳಿದರು—"ಚಾರು, ಆರೋಗ್ಯ ಸರಿಯಾಗಿಲ್ಲವೆ?" ಎಂದು.

ಪ್ರತ್ಯುತ್ತರವು ಬಾರದಿದ್ದುದರಿಂದ ಅವರೂ ಎದ್ದು ಕುಳಿತರು. ಹತ್ತಿರವೇ ವರಾಂಡದಿಂದ ಮೆಲ್ಲಗೆ ಅಳುವ ದನಿಯನ್ನು ಕೇಳಿ ಗಾಬರಿಯಾಗಿ ಅಲ್ಲಿಗೆ ಹೋದರು. ನೋಡುತ್ತಾರೆ, ಚಾರು ನೆಲದ ಮೇಲೆ ಬಿದ್ದುಕೊಂಡು ಉಕ್ಕಿ ಬರುತ್ತಿರುವ ಅಳುವನ್ನು ತಡೆದುಕೊಳ್ಳುತ್ತಿದ್ದಾಳೆ!

ಇಂತಹ ಶೋಕೋಛ್ವಾಸವನ್ನು ನೋಡಿ ಭೂಪತಿ ಬೆರಗಾದರು. ಅವರು ಯೋಚಿಸತೊಡಗಿದರು,—'ಚಾರುವಿನ ವಿಷಯದಲ್ಲಿ ನಾನು ತಪ್ಪು ತಿಳಿದುಕೊಂಡಿದ್ದೆನೆ? ಚಾರು ತನ್ನ ಹೃದಯವೇದನೆಯನ್ನು ನನ್ನಲ್ಲಿ ಹೇಳಬಾರದೆ! ಇಂತಹ ಮನೋಭೂಮಿಕೆಯವರ ಪ್ರೇಮವು ದೊಡ್ಡದು; ವೇದನೆಯೂ ದೊಡ್ಡದೇ ಇರುತ್ತದೆ.'

ಚಾರುವಿನ ಪ್ರೇಮವು ಸಾಧಾರಣ ಸ್ತ್ರೀಯರಂತೆ ಹೊರಗಣ್ಣಿಗೆ ಕಾಣುವಂತಹದಲ್ಲವೆಂದು ರಾಯರು ಮನಗಂಡರು. ಅವರು ಚಾರುವಿನ ಪ್ರೇಮದ

ಉಚ್ಛ್ವಾಸವನ್ನೆಂದೂ ನೋಡಿರಲಿಲ್ಲ. ಇಂದು ಅದನ್ನು ವಿಶೇಷರೂಪದಿಂದ ಅರಿತುಕೊಂಡರು. ಚಾರುವಿನ ಗುಪ್ತಪ್ರೇಮವು ಹೆಚ್ಚಾಗಿ ಒಳಗೇ ಹುದುಗಿಕೊಂಡಿದೆ. ಭೂಪತಿ ಕೂಡ ಪ್ರೇಮವನ್ನು ಹೊರಗೆ ತೋರಿಸುವಷ್ಟು ನಿಪುಣರಲ್ಲ. ಆದ್ದರಿಂದ ಅವರು ಚಾರುವಿನ ನಡತೆಯಲ್ಲಿಯೂ ಹೃದಯಾವೇಗದ ಸುಗಂಭೀರ ಅಂತಃಶೀಲತೆಯನ್ನು ಕಂಡುಕೊಂಡು ಒಂದು ಬಗೆಯಿಂದ ತೃಪ್ತಿಪಟ್ಟರು.

ಭೂಪತಿ ಚಾರುವಿನ ಹತ್ತಿರವೇ ಕುಳಿತುಕೊಂಡರು. ಏನೂ ಮಾತನಾಡದೆ ಅವಳ ಮೈಮೇಲೆ ಮೆಲ್ಲಗೆ ಕೈಯಾಡಿಸತೊಡಗಿದರು. ಸಂತೈಸುವ ರೀತಿಯೂ ರಾಯರಿಗೆ ಗೊತ್ತಿಲ್ಲ. ಅವರಿಗೆ ಅವಳ ಶೋಕದ ಕಾರಣವೇ ಗೊತ್ತಾಗಲಿಲ್ಲ. ಕತ್ತಲೆಯಲ್ಲಿ ಕುತ್ತಿಗೆ ಹಿಚುಕುವವನ ಮುಂದೆ ಯಾರಾದರೂ ನಿಂತರೆ ಅದು ಅವರಿಗೆ ಸಹನವಾಗುವುದಿಲ್ಲ!

## ೧೪

ಈಗ ಭೂಪತಿರಾಯರು ಪತ್ರಿಕೆಯ ಹೊಣೆಯನ್ನು ಬಿಟ್ಟು ತಲೆಯ ಮೇಲಿನ ಹೊರೆಯನ್ನು ಕಳಚಿಕೊಂಡಿದ್ದಾರೆ. ಆಗಿನಿಂದ ಅವರು ತಮ್ಮ ಭವಿಷ್ಯದ ಚಿತ್ರವನ್ನು ಚಿತ್ರಿಸಿಕೊಂಡಿದ್ದಾರೆ. ಇನ್ನು ಯಾವುದೇ ದುರಾಶೆ ದುಶ್ಚೇಷ್ಟೆಗಳಿಗೆ ಕೈಹಾಕುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಾರೆ. ಈಗ ಅವರು ಚಾರುವಿನ ಕೂಡ ಬರೆಯುವರು, ಓದುವರು, ಅವಳ ಜೊತೆಗೆ ಸೇರಿಕೊಂಡು ಪ್ರೇಮದಿಂದ ಪ್ರತಿ ದಿನದ ಗಾರ್ಹಸ್ಥಿಕ ಕರ್ತವ್ಯವನ್ನೂ ಪಾಲಿಸುವರು. "ಮನೆಯ ಸುಖವು ಸುಲಭವಾಗಿ ಸಿಗುವುದು. ಅದು ಹಿತಕರವೂ ಇರುವುದು. ಅದು ಪವಿತ್ರವೂ ನಿರ್ಮಲವೂ ಅಹುದು"—ಎಂದು ಅವರು ಯೋಚಿಸಿದ್ದರು. ಅವರು ಸುಖದಿಂದ ಜೀವನಗೃಹದ ಒಂದು ಮೂಲೆಯಲ್ಲಿ ಸಂಧ್ಯಾದೀಪವನ್ನು ಹಚ್ಚುವರು, ಶಾಂತಿಯ ರಾಜ್ಯವನ್ನು ಸ್ಥಾಪಿಸುವರು. ಅವರಿಗೆ ನಗೆ, ಹರಟೆ, ಮನೋರಂಜನೆಯ ಚಿಕ್ಕ-ದೊಡ್ಡ ಸಿದ್ಧತೆಗಳು ಬೇಕು. ಇವಕ್ಕೆ ಅಷ್ಟು ಪ್ರಯತ್ನವೂ ಬೇಕಾಗಿಲ್ಲ; ಮತ್ತು ಸಿಗುವ ಸುಖವೂ ಬಹಳ.

ಆದರೆ ಅಂಥ ಸುಖವು ಸುಲಭಸಾಧ್ಯವಲ್ಲವೆಂದು ಆ ಮೇಲೆ ರಾಯರಿಗೆ ಮನದಟ್ಟಾಯಿತು. ಅದು ಪೇಟೆಯಲ್ಲಿ ಸಿಗುವ ವಸ್ತುವಲ್ಲ. ತನ್ನಷ್ಟಕ್ಕೆ

ತಾನೇ ಅದು ಬಾರದಿದ್ದರೆ ಅದನ್ನು ಹುಡುಕಿ ತರುವುದು ಕಠಿನವಾಗುವುದು.

ಭೂಪತಿ ಎಷ್ಟು ಯತ್ನಿಸಿದರೂ ಚಾರುವಿನ ಕೂಡ ಘನಿಷ್ಠ ಸಂಬಂಧ ವನ್ನು ಬೆಳಸದಾದರು. ಇದಕ್ಕೆ ತಾವೇ ತಪ್ಪುಗಾರರೆಂದು ಅವರು ತಿಳಿದರು. ಒಂದೇ ಸಮನಾಗಿ ಹನ್ನೆರಡು ವರುಷ ಪತ್ರಿಕೆಗೆ ಬರೆದು ಬರೆದು ಅವರು ಸ್ತ್ರೀಯ ಕೂಡ ಹೇಗೆ ಮಾತನಾಡಬೇಕು, ಹೇಗೆ ಹರಟೆ ಹೊಡೆಯಬೇಕು ಎಂಬುದನ್ನು ಸಂಪೂರ್ಣ ಮರೆತುಬಿಟ್ಟಿದ್ದಾರೆ. ಸಂಜೆಗೆ ದೀಪ ಹಚ್ಚುತ್ತಲೇ ಅವರು ಮನೆ ಸೇರುತ್ತಾರೆ, ಒಂದೆರಡು ಮಾತನಾಡುತ್ತಾರೆ. ಹೆಂಡತಿಯೂ ಒಂದೆರಡು ಮಾತನಾಡುತ್ತಾಳೆ. ಮುಂದೇನು ಮಾಡಬೇಕೆಂಬುದೇ ಅವರಿಗೆ ತಿಳಿಯದಂತಾಗುತ್ತದೆ. ತಮ್ಮ ಈ ಅಸಮರ್ಥತೆಗಾಗಿ ಅವರು ಸ್ತ್ರೀಯ ಎದುರು ಲಜ್ಜಿತರಾಗುತ್ತಾರೆ. ಹೆಂಡತಿಯೊಂದಿಗೆ ಹರಟುವುದು ಸುಲಭವೆಂದು ಅವರು ಮೊದಲು ತಿಳಿದುಕೊಂಡಿದ್ದರು. ಆದರೆ ಅದು ಕಠಿನವೆಂದು ಅವರಿಗೆ ಈಗ ತೋರಿತು. ಇದಕ್ಕಿಂತ ಸಭೆಯಲ್ಲಿ ಮಾತನಾಡುವುದು ಹೆಚ್ಚು ಸುಲಭ!

ಹೊತ್ತು ಮುಳುಗಿದ ಬಳಿಕ ಹುಡುಗಾಟಿಕೆ ಮತ್ತು ಪ್ರೀತಿಯ ಮಾತುಗಳಿಂದ ಹೊತ್ತುಗಳೆಯಬೇಕೆಂದು ಅವರು ಸಂಕಲ್ಪಿಸಿಕೊಂಡಿದ್ದರು. ಈಗ ಆ ಹೊತ್ತನ್ನು ನೂಕುವುದು ಅವರಿಗೆ ಒಂದು ಸಮಸ್ಯೆಯೆ ಆಯಿತು. ಕೊಂಚ ಹೊತ್ತು ಸುಮ್ಮನಿದ್ದು, ಆ ಮೇಲೆ ಎದ್ದುಹೋಗಲೆ ಎಂದು ಯೋಚಿ ಸುತ್ತಿದ್ದರು. ಆದರೆ ತಾನು ಎದ್ದುಹೋದರೆ ಚಾರು ಏನು ತಿಳಿದುಕೊಳ್ಳುವಳೊ ಎಂದು ಯೋಚಿಸಿ ಅವರು ಎದ್ದು ಹೋಗುತ್ತಿರಲಿಲ್ಲ.

"ಚಾರು, ಪಗಟೆಯಾಟ ಆಡುವೆಯಾ?" ಎನ್ನುತ್ತಿದ್ದರು ಭೂಪತಿ.

ಚಾರು ಮುಂದುಗಾಣದೆ "ಹೂಂ" ಎಂದು ಉತ್ತರ ಕೊಡುತ್ತಿದ್ದಳು. ಮನಸ್ಸಿರದಿದ್ದರೂ ಆ ಆಟದ ಸಾಮಾನು ತರುತ್ತಿದ್ದಳು, ಹಲವಾರು ತಪ್ಪು ಮಾಡಿ ಸೋಲುತ್ತಿದ್ದಳು. ಹೀಗಾಗಿ ಅವರಿಗೆ ಆ ಆಟದಲ್ಲಿ ಎಷ್ಟು ಮಾತ್ರಕ್ಕೂ ಆನಂದವಿರುತ್ತಿರಲಿಲ್ಲ.

"ಚಾರು, ಮಂದಾಕಿನಿಯನ್ನು ಕರೆಸಿಕೊಂಡರೆ ಹೇಗೆ?" ಭೂಪತಿ ಬಹಳ ಯೋಚನೆ ಮಾಡಿ ನಂತರ ಒಂದು ದಿನ ಕೇಳಿದರು.

ಚಾರು ಮಂದಾನ ಹೆಸರು ಕೇಳುತ್ತಲೆ ಸಿಡಿಮಿಡಿಗೊಂಡಳು. 'ಬೇಡ, ನನಗೆ ಅವಳ ಅವಶ್ಯಕತೆ ಇಲ್ಲ' ಎಂದಳು.

ಭೂಪತಿ ನಕ್ಕು ಮನಸ್ಸಿನೊಳಗೇ ಆನಂದಪಟ್ಟರು. ಸತೀ ಸ್ತ್ರೀಯರು

ಸತೀ ಧರ್ಮವು ಸ್ವಲ್ಪವೂ ವ್ಯತಿಕ್ರಮವಾದುದನ್ನು ಕಂಡರೆ ಸಹಿಸಿಕೊಳ್ಳಲಾರರು!

ವಿದ್ವೇಷದ ಮೊದಲನೆಯ ಆಘಾತವನ್ನು ತಾಳಿಕೊಂಡು ಚಾರು ಯೋಚನೆಮಾಡಿದಳು. ಮಂದಾ ಬಂದರೆ ರಾಯರನ್ನು ಪ್ರಸನ್ನತೆಯಿಂದಿಡುವಳು. ಅವರು ಅವಳಿಂದ ಮಾನಸಿಕ ಸುಖ ಬಯಸುವರೆಂದು ಬಗೆದು ಬಹಳ ವಿಷಾದಪಟ್ಟಳು. ಚಾರುವಿನಿಂದ ಇದನ್ನು ಒದಗಿಸುವುದು ಸಾಧ್ಯವಿರಲಿಲ್ಲ. ಭೂಪತಿ ವಿಶ್ವಸಂಸಾರವನ್ನು ತೊರೆದು ಚಾರುವಿನಿಂದಲೇ ತಮ್ಮ ಜೀವನದಲ್ಲಿ ಆನಂದಪಡೆಯಲು ಯತ್ನಿಸುತ್ತಿದ್ದಾರೆ. ಈ ಪ್ರಯತ್ನವನ್ನು ನೋಡಿ ಹಾಗೂ ತನ್ನ ಹೃದಯದ ದೈನ್ಯಾವಸ್ಥೆಯನ್ನು ಕಂಡುಕೊಂಡು ಚಾರು ನಡುಗಿದಳು. ಹೀಗೆ ಇನ್ನೆಷ್ಟು ದಿನ ಕಳೆಯಬೇಕು ? ಭೂಪತಿ ಇದಕ್ಕಾಗಿ ಬೇರೆ ಏನನ್ನಾದರೂ ಏಕೆ ಆಶ್ರಯಿಸುವುದಿಲ್ಲ? ಬೇರೆ ಒಂದು ಪತ್ರಿಕೆಯನ್ನು ಏಕೆ ತೆಗೆಯುವುದಿಲ್ಲ? ಭೂಪತಿಯ ಮನೋರಂಜನೆಗೆ ಚಾರು ಯಾವ ಅಭ್ಯಾಸವನ್ನೂ ಮಾಡಬೇಕಾಗಿ ಬರಲಿಲ್ಲ. ಆಗ ರಾಯರು ಅವಳಿಂದ ಯಾವ ಸೇವೆಯನ್ನೂ ಆಶಿಸಲಿಲ್ಲ, ಯಾವ ಬಗೆಯ ಸುಖವನ್ನೂ ಆಶಿಸಲಿಲ್ಲ; ಚಾರು ತನಗೆ ಎಲ್ಲ ಬಗೆಯಿಂದ ಬೇಕೆಂಬುದನ್ನೂ ಅವರು ಕಂಡುಹಿಡಿಯಲಿಲ್ಲ. ಆದರೆ ಇಂದು ಅವರು ತಮ್ಮ ಆಯುಷ್ಯದ ಸಂಪೂರ್ಣ ಅವಶ್ಯಕತೆಗಳನ್ನು ಚಾರುವಿನಿಂದಲೇ ಒದಗಿಸಿಕೊಳ್ಳಲು ಹಂಬಲಿಸುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಚಾರುವಿನ ಬುದ್ಧಿಗೆ ಏನೂ ಹೊಳೆಯದಂತಾಗಿದೆ. ಭೂಪತಿಗೆ ಏನು ಬೇಕು, ಏತರಿಂದ ಅವರು ತೃಪ್ತರಾಗುವರು, ಎಂಬುದನ್ನು ಚಾರು ಸರಿಯಾಗಿ ಅರಿಯಳು ; ಅರಿತರೂ ಅದನ್ನು ಈಗ ಈಡೇರಿಸುವುದು ಅವಳ ಶಕ್ತಿಯ ಹೊರಗಿನ ಮಾತಾಗಿದೆ.

ಭೂಪತಿ ಮೆಲ್ಲಮೆಲ್ಲಗೆ ಏಳ್ಗೆಹೊಂದಿದ್ದರೆ ಚಾರುವಿಗೆ ಇಷ್ಟು ತೊಂದರೆ ಎನಿಸುತ್ತಿರಲಿಲ್ಲ. ಆದರೆ ಒಂದು ದಿನ ಬೆಳಗಾಗುವುದರೊಳಗೆ ಒಮ್ಮೆಲೇ ಎಲ್ಲವನ್ನೂ ಕಳೆದುಕೊಂಡು ಬರಿಯ ಭಿಕ್ಷಾಪಾತ್ರೆಯನ್ನು ಮುಂದೆ ಒಡ್ಡಿದರೆ ಅವಳೇನು ಮಾಡಬೇಕು? ಅವಳಿಗೆ ಆಕಾಶವೇ ಕಳಚಿಬಿದ್ದಂತಾಯಿತು.

"ಆಗಲಿ, ಮಂದಾನನ್ನು ಕರೆಸಿಕೊಳ್ಳಿ. ಅವಳು ಬಂದರೆ ನಿಮ್ಮ ಸೇವೆ ಶುಶ್ರೂಷೆಗೆ ಅನುಕೂಲವಾಗುವುದು" ಎಂದಳು ಚಾರು.

"ನನ್ನ ಸೇವೆಯೆ! ಏನೂ ಬೇಡ"—ನಕ್ಕು ಭೂಪತಿ ಹೇಳಿದರು.

'ನಾನೊಬ್ಬ ನೀರಸ ಮನುಷ್ಯ. ಚಾರು ಸುಖವಾಗಿ ಇರುವಂತೆ ನಾನು ಮಾಡಲಾರೆ' ಎಂದು ಭೂಪತಿ ವಿಷಾದಪಡತೊಡಗಿದರು.

ಈ ಯೋಚನೆಯಿಂದ ರಾಯರು ಸಾಹಿತ್ಯಕ್ಕೆ ಕೈಹಾಕಿದರು. ಅವರ ಮನೆಗೆ ಬಂದ ಯಾರಾದರೂ ಗೆಳೆಯರಿಗೆ ಇದರಿಂದ ಅಚ್ಚರಿಯೆನಿಸುತ್ತಿತ್ತು. ರಾಯರು ಟೆನಿಸನ್, ಬೈರನ್, ಬಂಕಿಮ್‌ಚಂದ್ರರ ಸಾಹಿತ್ಯದಲ್ಲಿ ತೊಡಗಿರುತ್ತಿದ್ದರು. ಅವರ ಈ ಅಕಾಲ-ಕಾವ್ಯಾನುರಾಗವನ್ನು ನೋಡಿ ಅವರ ಗೆಳೆಯರು ನಗೆಯಾಡತೊಡಗಿದರು. ಅದಕ್ಕೆ ರಾಯರು ನಕ್ಕು 'ಬಿದಿರೂ ಹೂ ಬಿಡುತ್ತದೆ; ಆದರೆ ಅದು ಯಾವಾಗ ಎಂಬುದನ್ನು ಯಾರೂ ಅರಿಯರು' ಎಂದು ಹೇಳುತ್ತಿದ್ದರು.

ಒಂದು ದಿನ ಸಂಜೆಗೆ ರಾಯರು ದೀಪ ಹಚ್ಚಿ—"ಚಾರು, ಒಂದು ಲೇಖನವನ್ನು ಓದಲೆ?" ಎಂದರು ಸಂಕೋಚದಿಂದ.

"ಓದಬಾರದೆ?"

"ಏನು ಓದಲಿ?"

"ನಿಮ್ಮ ಮನಸ್ಸಿಗೆ ಬಂದದ್ದು."

ಚಾರು ಹೆಚ್ಚು ಆಗ್ರಹ ಮಾಡಲಿಲ್ಲ. ಅದರಿಂದ ಭೂಪತಿ ಹೆದರಿದರು. ಆದರೂ "ಟೆನಿಸನ್ನನ ಲೇಖನಗಳನ್ನು ನಿನಗೆ ಅನುವಾದ ಮಾಡಿ ಹೇಳುತ್ತೇನೆ" ಸಾಹಸದಿಂದ ಎಂದರು ಅವರು.

"ಹೇಳಿ" ಎಂದಳು ಚಾರು.

ಸಂಕೋಚ, ನಿರುತ್ಸಾಹಗಳು ಅವರ ಓದಿಗೆ ಅಡ್ಡಿ ತಂದವು. ತಿಳಿಸಿ ಹೇಳಲು ಅವರಿಗೆ ಸರಿಯಾದ ಶಬ್ದಗಳೇ ಸಿಗಲಿಲ್ಲ. ಹೀಗಾಗಿ ಎಲ್ಲವೂ ನಿಷ್ಪ್ರಯೋಜನವಾಯಿತು. ಚಾರುವಿನ ಶೂನ್ಯ ದೃಷ್ಟಿಯನ್ನು ನೋಡಿ ಅವಳಿಗೆ ಮನಸ್ಸಿಲ್ಲವೆಂದು ಅವರು ತಿಳಿದರು. ಆ ದೀಪಾಲೋಕಿತ ಸಣ್ಣ ಕೋಣೆಯಲ್ಲಿ ಆ ಏಕಾಂತ ರಾತ್ರಿಯಲ್ಲಿ ಕೂಡ ಇಬ್ಬರ ಮನಸ್ಸೂ ಒಂದಾಗಲಿಲ್ಲ.

ಭೂಪತಿಗೆ ಹೀಗೆಯೇ ಮತ್ತೆ ಒಂದೆರಡು ಸಲ ಭ್ರಮೆಯೆನಿಸಿತು. ಕೊನೆಗೆ ಅವರು ಹೆಂಡತಿಯೊಂದಿಗೆ ಸಾಹಿತ್ಯ ಚರ್ಚೆ ಮಾಡುವುದನ್ನೇ ಬಿಟ್ಟರು.

ಹೆಚ್ಚು ಪೆಟ್ಟು ತಾಗಿದಾಗ ಸ್ನಾಯು ದುರ್ಬಲವಾಗುತ್ತವೆ. ಆಗ ನೋವು ಗೊತ್ತೇ ಆಗುವುದಿಲ್ಲ. ಅದೇ ಮೇರೆಗೆ ಮೊದಮೊದಲು ಚಾರುವಿಗೆ ಅಮಲನ ಅಭಾವವು ಎನಿಸಲಿಲ್ಲ.

ಕೊನೆಗೆ, ದಿನಗಳ ಮೇಲೆ ದಿನಗಳು ಕಳೆದಂತೆ ಅವಳಿಗೆ ಅಮಲನ ಅಭಾವವು, ಸಾಂಸಾರಿಕ ಶೂನ್ಯತೆಯ ಆಳವು, ಕ್ರಮಶಃ ಹೆಚ್ಚಾಗಿ ತೋರುತ್ತಲೇ ನಡೆಯಿತು. ಇದು ಗೊತ್ತಾಗುತ್ತಿದ್ದಂತೆ ಅವಳ ಬುದ್ಧಿ ಮಂಕಾಯಿತು. ಅವಳು ನಿಕುಂಜವನದಿಂದ ಹೊರಗೆಬಿದ್ದು ಮರುಭೂಮಿಗೆ ಬಂದಳು! ದಿನಗಳ ಮೇಲೆ ದಿನಗಳು ಜಾರುತ್ತಿವೆ. ಮರುಭೂಮಿಯ ವಿಸ್ತಾರವೂ ಹೆಚ್ಚುತ್ತಿದೆ. ಈ ಮರುಭೂಮಿಯನ್ನು ಅವಳು ಈ ಮೊದಲು ಅರಿಯಳು.

ಕಣ್ಣು ತೆರೆಯುತ್ತಲೇ ಚಾರುವಿನ ಎದೆ ಡವಡವ ಎನ್ನುತ್ತಿತ್ತು. ಅಮಲನ ನೆನಪು ಬರುತ್ತಿತ್ತು. ಆದರೆ ಅವನು ಇಲ್ಲ. ಬೆಳಿಗ್ಗೆ ಅವಳು ವರಾಂಡದಲ್ಲಿ ಕುಳಿತು ಪಾನ್‌ಪಟ್ಟಿ ಕಟ್ಟುತ್ತಿರುವಾಗ ಅಮಲನು ಈಗ ಬರುವುದಿಲ್ಲ ಎಂಬುದು ಅವಳಿಗೆ ಕ್ಷಣಕ್ಷಣಕ್ಕೂ ಎನಿಸುತ್ತಿತ್ತು. ಒಮ್ಮೊಮ್ಮೆ ಅನ್ಯಮನಸ್ಕಳಾಗಿ ಬೇಕಾದುದಕ್ಕಿಂತ ಹೆಚ್ಚಾಗಿ ಕಟ್ಟುತ್ತಿದ್ದಳು. ಆ ಮೇಲೆ, ಹೆಚ್ಚಾದ್ದನ್ನು ಹಾಕಿಕೊಳ್ಳುವವರಿಲ್ಲವೆಂಬುದು ಗೊತ್ತಾಗುತ್ತಿತ್ತು! ಅಡಿಗೆಯ ಮನೆಗೆ ಕಾಲಿಟ್ಟಾಗ ತಿಂಡಿ ತಿನ್ನುವ ಅಮಲನಿಲ್ಲವೆಂಬುದು ಗೊತ್ತಾಗುತ್ತಿತ್ತು. ಮನಸ್ಸಿನ ಅಧೈರ್ಯವು ಅಂತಃಪುರದ ಸೀಮಾಂತಕ್ಕೆ ಹೋಗಿ ಅಮಲನು ಕಾಲೇಜಿನಿಂದ ಬರುವುದಿಲ್ಲವೆಂದು ನೆನಪು ಮಾಡಿಕೊಡುತ್ತಿತ್ತು. ಹೊಸ ಪುಸ್ತಕ, ಹೊಸ ಲೇಖ, ಹೊಸ ಸುದ್ದಿ, ಹೊಸ ಹೊಸ ಹುಡುಗಾಟಿಕೆಗಳನ್ನು ಯಾರಿಂದಲೂ ಅವಳು ಬಯಸುವಂತಿರಲಿಲ್ಲ. ಯಾರಿಗಾಗಿಯೂ ಅವಳು ಇನ್ನು ಹೊಲಿಗೆಯ ಕೆಲಸ ಮಾಡಬೇಕಾಗಿರಲಿಲ್ಲ. ಯಾವ ಲೇಖನವನ್ನೂ ಬರೆಯುವ ಗೊಡವೆಗೆ ಹೋಗುವ ಅವಶ್ಯಕತೆ ಇಲ್ಲ. ಮನಮೋಹಕ ವಸ್ತುವನ್ನು ಕೊಂಡಿಡುವ ಯೋಚನೆ ಇಲ್ಲ.

ಚಾರು ಇಂತಹ ಅಸಹ್ಯ ಕಷ್ಟದಿಂದ, ಚಾಂಚಲ್ಯದಿಂದ ವಿಸ್ಮಿತಳಾಗಿದ್ದಾಳೆ. ಮನೋವೇದನೆಯಿಂದ ಒಂದೇಸಮನೆ ನೊಂದುಕೊಂಡು ಕೊನೆಗೆ

ಅವಳು ಹೆದರಿಬಿಟ್ಟಳು. "ಏಕೆ, ಇಷ್ಟೇಕೆ ಕಸಿವಿಸಿಯಾಗುತ್ತಿದೆ ನನಗೆ? ಅಮಲನು ನನಗೇನಾಗಬೇಕು? ಅವನಿಗಾಗಿ ನಾನೇಕೆ ಇಷ್ಟು ಪೇಚಾಡಬೇಕು? ಆಳುಹೋಳುಗಳು, ಹಾದಿಹೋಕರು ನಿಶ್ಚಿಂತೆಯಿಂದ ತಿರುಗಾಡುತ್ತಾರೆ. ನಾನೇ ಏಕೆ ಹೀಗೆ ಬೇಗುದಿಗೊಳ್ಳಬೇಕು? ದೇವರು ನನ್ನನ್ನು ಈ ಸಂಕಟದ ಕೊಳ್ಳದಲ್ಲಿ ಏಕೆ ನೂಕಿದ?"— ಎಂದು ಅವಳು ಆಗಾಗ ತನ್ನನ್ನು ಕುರಿತು ತಾನೇ ಪ್ರಶ್ನೆ ಮಾಡಿಕೊಳ್ಳುತ್ತಿದ್ದಳು.

ಅವಳು ಆಗಾಗ ತನಗೆ ತಾನೇ ಪ್ರಶ್ನೆಮಾಡಿಕೊಳ್ಳುತ್ತಿದ್ದಳು, ಅಚ್ಚರಿಪಡುತ್ತಿದ್ದಳು; ಆದರೆ ದುಗುಡವು ಮಾತ್ರ ದೂರವಾಗುತ್ತಿರಲಿಲ್ಲ. ಅಮಲನ ಸ್ಮೃತಿಯು ಅವಳ ಅಂತರಂಗ ಬಹಿರಂಗಗಳನ್ನು ವ್ಯಾಪಿಸಿತ್ತು. ಅದರಿಂದ ತಪ್ಪಿಸಿಕೊಳ್ಳಲು ಅವಳಿಗೆ ಆಸ್ಪದವಿರಲಿಲ್ಲ.

ಅಮಲನ ಸ್ಮೃತಿ ಚಾರುವನ್ನು ಆಕ್ರಮಿಸಿತ್ತು. ಭೂಪತಿ ಆ ಆಕ್ರಮಣವನ್ನು ತಡೆಯಬೇಕಾಗಿತ್ತು. ಅದರ ಬದಲು ಆ ವಿಚ್ಛೇದವ್ಯಥಿತ ಸ್ನೇಹಶೀಲ ಪತಿ ಯಾವಾಗಲೂ ಅವನ ನೆನಪು ಮಾಡಿಕೊಡುತ್ತಿದ್ದರು.

ಕೊನೆಗೆ ಚಾರು ಕರ್ಣ್ಣಧಾರವನ್ನು ಬಿಟ್ಟೇಬಿಟ್ಟಳು. ತನ್ನೊಂದಿಗೆ ತಾನೆ ಕಾದಾಡುವುದನ್ನು ನಿಲ್ಲಿಸಿದಳು, ಸೋಲನ್ನೊಪ್ಪಿಕೊಂಡಳು. ಅಮಲನ ಸ್ಮೃತಿಗೆ ಅವಳು ಹೃದಯದಲ್ಲಿ ಆದರದಿಂದ ಸ್ಥಳಕೊಟ್ಟಳು.

ಅಲ್ಲಿಂದ ಮುಂದೆ ಚಾರು ಅಮಲನನ್ನು ಏಕಾಗ್ರಚಿತ್ತದಿಂದ ನೆನೆಸುತ್ತಿದ್ದಳು. ಇದು ಚಾರುವಿಗೆ ಅಭಿಮಾನದ ವಾತಾಯಿತು. ಆ ಸ್ಮೃತಿಯೆ ಜೀವನವ ಶ್ರೇಷ್ಠ ಧನವೆಂದು ಅವಳು ತಿಳಿದಳು.

ಚಾರು ಮನೆಯ ಕೆಲಸ-ಬೊಗಸೆಗಳನ್ನು ಮಾಡಿಕೊಂಡ ಮೇಲೆ ಇದಕ್ಕೆ ಒಂದು ವೇಳೆಯನ್ನು ಗೊತ್ತುಮಾಡಿಕೊಂಡಿದ್ದಳು. ಆಗ ಅವಳು ಏಕಾಂತದ ಕೋಣೆಯಲ್ಲಿ ಬಾಗಿಲು ಮುಚ್ಚಿಕೊಂಡು, ಅಮಲನನ್ನು ನೆನಸಿಕೊಂಡು ತನ್ನ ಜೀವನದ ಪ್ರತಿಯೊಂದು ಘಟನೆಯನ್ನೂ ಜ್ಞಾಪಕಕ್ಕೆ ತಂದುಕೊಳ್ಳುತ್ತಿದ್ದಳು. ಒಮ್ಮೊಮ್ಮೆ ತೆಕ್ಕೆಯ ಮೇಲೆ ಬಿದ್ದುಕೊಂಡು 'ಅಮಲ, ಅಮಲ, ಅಮಲ!' ಎನ್ನುತ್ತಿದ್ದಳು. ಸಮುದ್ರದಾಚೆಯಿಂದ—"ಅಕ್ಕ, ಅಕ್ಕ, ಅಕ್ಕ (ಅತ್ತಿಗೆ)" ಎಂದು ಉತ್ತರ ಬರುತ್ತಿತ್ತು. ಚಾರು ತನ್ನ ನೀರೂರಿದ ಕಣ್ಣುಗಳನ್ನು ಮುಚ್ಚಿಕೊಂಡು—"ಅಮಲ, ನೀನು ಬೇಸರಪಟ್ಟುಕೊಂಡು ಏಕೆ ಹೋದೆ? ನಾನು ಯಾವ ತಪ್ಪನ್ನೂ ಮಾಡಿಲ್ಲ. ನೀನು ಸಂತೋಷದಿಂದ ನಗುತ್ತ ಕೆಲೆಯುತ್ತ

ಹೋಗಿದ್ದರೆ, ನಾನು ಇಂದು ಇಷ್ಟು ಪೇಚಾಡುತ್ತಿರಲಿಲ್ಲ" ಎನ್ನುತ್ತಿದ್ದಳು. ಅವಳು ಅಮಲನ ಎದುರಿಗೆ ಮಾತಾಡುತ್ತಿದ್ದಂತೆಯೇ "ಅಮಲ, ನಾನು ನಿನ್ನನ್ನು ಒಂದು ದಿನವೂ ಮರೆತಿಲ್ಲ! ಒಂದು ದಿನವೂ ಇಲ್ಲ, ಒಂದು ಕ್ಷಣವೂ ಇಲ್ಲ! ನನ್ನ ಆಯುಷ್ಯದಲ್ಲಿ ಶ್ರೇಷ್ಠ ಸಂಗತಿಗಳನ್ನು ನೀನೇ ಬೆರೆಸಿರುವೆ. ಆದ್ದರಿಂದ ನನ್ನ ಜೀವನದ ಸಾರಭಾಗದಿಂದ ಪ್ರತಿದಿನವೂ ನಿನ್ನನ್ನು ಪೂಜಿಸುವೆ" ಎನ್ನುತ್ತಿದ್ದಳು.

ಹೀಗೆ ಚಾರು ತನ್ನ ಮನೆತನದ ತನ್ನ ಸಮಸ್ತ ಕರ್ತವ್ಯಗಳ ಅಂತಸ್ತರದ ಕೆಳಗೆ ಬಿರುಕು ಮಾಡಿದಳು. ಆ ನಿರಾಲೋಕ ನಿಸ್ತಬ್ಧ ಅಂಧಃಕಾರದಲ್ಲಿ ಅಶ್ರು ಮಾಲೆಯಿಂದ ಸುಸಜ್ಜಿತವಾದ ಒಂದು ಗುಪ್ತ ಶೋಕಮಂದಿರವನ್ನು ಕಟ್ಟಿದಳು. ಅಲ್ಲಿ ಭೂಪತಿ ಅಥವಾ ಮತ್ತಿತರ ಜನರಿಗೆ ಹೋಗಲು ಅಧಿಕಾರವಿಲ್ಲ. ಆ ಸ್ಥಳವು ಗುಪ್ತವಿದ್ದಷ್ಟು ಗಂಭೀರವೂ ಪ್ರಿಯಕರವೂ ಆಗಿದ್ದಿತು. ಅವಳು ತನ್ನ ಈ ಮಂದಿರವನ್ನು ಜಗತ್ತಿನ ಸಂಪೂರ್ಣ ಛದ್ಮವೇಷವನ್ನು ತೆಗೆದೊಗೆದು ಅನಾವೃತ ಆತ್ಮಸ್ವರೂಪದಿಂದ ಪ್ರವೇಶ ಮಾಡುವಳು. ಅಲ್ಲಿಂದ ಹೊರಗೆ ಬಿದ್ದು ಮುಸುಕು ಹಾಕಿಕೊಂಡು ಜಗತ್ತಿನ ಹಾಸ್ಯಾಲಾಪದ ಹಾಗೂ ಕ್ರಿಯಾ ಕರ್ಮದ ರಂಗಭೂಮಿಗೆ ಬರುವಳು.

೧೬

ಹೀಗೆ ಮನಸ್ಸಿನೊಂದಿಗೆ ನಡೆದ ದ್ವಂದ್ವ-ವಿವಾದವನ್ನು ಬಿಟ್ಟು ಚಾರು ತನ್ನ ಗಂಭೀರ ವಿಷಾದದಲ್ಲಿ ಕೂಡ ಒಂದು ಬಗೆಯ ಶಾಂತಿಯನ್ನು ಪಡೆದಿದ್ದಳು. ಅವಳು ಏಕನಿಷ್ಠಳಾಗಿ ಗಂಡನ ಸೇವೆ ಮಾಡತೊಡಗಿದಳು. ಭೂಪತಿ ಮಲಗಿದಾಗ ಮೆಲ್ಲಮೆಲ್ಲಗೆ ಅವರ ಕಾಲಹತ್ತಿರ ತನ್ನ ತಲೆಯನ್ನಿಟ್ಟು ಚರಣರಜವನ್ನು ತನ್ನ ತಲೆಗೆ ಹಚ್ಚಿಕೊಳ್ಳುತ್ತಿದ್ದಳು. ಕೆಲಸಬೊಗಸೆ, ಸೇವೆ, ಗೃಹಕೃತ್ಯ, ಯಾವುದರಲ್ಲೂ ಅವಳು ಹಿಂದೆಗೆಯುತ್ತಿದ್ದಿಲ್ಲ. ಆಶ್ರಿತ ಹಾಗೂ ಪ್ರತಿಪಾಲಿತ ವ್ಯಕ್ತಿಗಳನ್ನು ಭೂಪತಿ ಯಾವುದೇ ಬಗೆಯ ಉಪೇಕ್ಷೆಯ ದೃಷ್ಟಿಯಿಂದ ನೋಡರು. ಎಲ್ಲಿಯಾದರೂ ಅಂತಹ ನಡತೆ ಕಂಡುಬಂದರೆ ಅದಕ್ಕೆ ವಿಷಾದಿಸುವರು. ಇದನ್ನು ಲಕ್ಷ್ಯಗೊಟ್ಟು ಚಾರು ನೋಡಿಕೊಳ್ಳು

ತ್ತಿದ್ದಳು. ಹೀಗೆ ಕೆಲಸ ಬೊಗಸೆಗಳನ್ನು ಪೂರೈಸಿಕೊಂಡು ಅವಳು ಭೂಪತಿಯ ಎಂಜಲುತಟ್ಟೆಯ ಪ್ರಸಾದವನ್ನು ತಿಂದು ದಿನಗಳೆಯುತ್ತಿದ್ದಳು.

ಈ ಸೇವೆಶುಶ್ರೂಷೆಯಿಂದ ಭೂಪತಿಗೆ ಪುನಃ ನವಯೌವನವು ಬಂದಂತಾಯಿತು. ಅಂದು ಆಗರು ವಿವಾಹವಾದುದು ಸುಳ್ಳು, ಇದೇ ನಿಜ ಎಂಬಂತಾಯಿತು. ಭೂಪತಿ ಅಲಂಕಾರದಿಂದ, ಹಾಸ್ಯ-ಪರಿಹಾಸ್ಯದಿಂದ ವಿಕಸಿತರಾಗಿ ಸಂಸಾರದ ಎಲ್ಲ ದುಶ್ಚಿಂತೆಗಳನ್ನು ದೂರಮಾಡಿ ಬದಿಗೆ ಸರಿಸಿದರು. ಜೇನೆ ಬಿದ್ದು ಎದ್ದಾಗ ಹಸಿವೆ ಹೆಚ್ಚಾಗುತ್ತದೆ. ಶರೀರದಲ್ಲಿ ಭೋಗ-ವಿಲಾಸದ ಸಚೇತನೆಯ ಅನುಭವವಾಗತೊಡಗುತ್ತದೆ. ಭೂಪತಿಯ ಮನಸ್ಸಿನಲ್ಲೂ ಅದೇ ಬಗೆಯ ಒಂದು ಅಪೂರ್ವ ಹಾಗೂ ಪ್ರಬಲ ಭಾವಾವೇಶವು ಸಂಚರಿಸತೊಡಗಿತು. ಗೆಳೆಯರಿಗೂ ಚಾರುವಿಗೂ ತಿಳಿಯದಂತೆ, ಮರೆಯಲ್ಲಿ, ರಾಯರು ಕವಿತೆ ಓದತೊಡಗಿದರು. "ಪತ್ರಿಕೆಯನ್ನು ಮುಚ್ಚಿ ಎಷ್ಟೋ ಕಷ್ಟ-ನಷ್ಟಗಳನ್ನು ಎದುರಿಸಿದ ಮೇಲೆ ಇಂದು ನನಗೆ ಹೆಂಡತಿ ಸಿಕ್ಕಿದ್ದಾಳೆ!" ಎಂದು ಅವರು ಮನಸ್ಸಿನಲ್ಲೇ ಎನ್ನುತ್ತಿದ್ದರು.

"ಚಾರು, ಇತ್ತೀಚೆ ನೀನು ಬರೆಯುವುದನ್ನೇಕೆ ಪೂರ್ಣವಾಗಿ ಬಿಟ್ಟು ಬಿಟ್ಟೆ"—ಭೂಪತಿ ಚಾರುವಿಗೆ ಕೇಳಿದರು.

"ನನಗೇನು ಬರುತ್ತದೆ!" ಎಂದಳು ಚಾರು.

"ಚಾರು, ನಿನ್ನ ಹಾಗೆ ಬರೆಯುವವರನ್ನು ನಾನು ಕಾಣಲಿಲ್ಲ. ಇದು ನಿಜ! 'ವಿಶ್ವಬಂಧು' ಬರೆದಂತೆಯೇ ನಾನೂ ಅಭಿಪ್ರಾಯ ಪಡುತ್ತೇನೆ."

"ಸಾಕು, ಇರಲಿ ಬಿಡಿ!"

"ಇದನ್ನು ನೋಡಬಾರದೆ" ಎಂದು ರಾಯರು 'ಸರೋರುಹ'ದ ಒಂದು ಸಂಚಿಕೆಯನ್ನು ತೆಗೆದು ಚಾರು ಹಾಗೂ ಅಮಲನ ಭಾಷೆಯನ್ನು ಹೋಲಿಸಿ ನೋಡತೊಡಗಿದರು. ಚಾರುವಿನ ಮೋರೆ ಕೆಂಪಾಯಿತು. ಅವಳು ರಾಯರ ಕೈಯೊಳಗಿನ ಪತ್ರಿಕೆಯನ್ನು ಕಸಿದುಕೊಂಡು ಸೆರಗಿನಲ್ಲಿ ಮುಚ್ಚಿಕೊಂಡಳು.

"ಗೆಳೆಯರಿದ್ದರೆ ಬರೆವಣಿಗೆ ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಬರೆಯುವುದೇ ಆಗುವುದಿಲ್ಲ. ಆಗಲಿ, ನಾನೂ ಬರೆಯುವ ರೂಢಿಮಾಡಿಕೊಳ್ಳುತ್ತೇನೆ. ಎಂದರೆ ಮತ್ತೆ ಚಾರುವಿಗೆ ಪ್ರೋತ್ಸಾಹವು ಸಿಕ್ಕಂತಾಗುವುದು."—ಭೂಪತಿ ಮನಸ್ಸಿನಲ್ಲೇ ಯೋಚಿಸಿಕೊಂಡರು.

ಭೂಪತಿ ಪುಸ್ತಕವನ್ನು ತೆಗೆದುಕೊಂಡು ಯಾರಿಗೂ ಗೊತ್ತಾಗದ ಹಾಗೆ

ಬರೆಯಲಾರಂಭಿಸಿದರು. ಕೋಶವನ್ನು ಆಗಾಗ ನೋಡಿಕೊಂಡು ಒಂದೇಸಮನೆ ಬರೆವಣಿಗೆಯನ್ನು ಹೊಡೆದುಹಾಕಿ ತಿದ್ದಿ, ಬರೆಯತೊಡಗಿದರು. ಅವರು ಪ್ರಯತ್ನಪೂರ್ವಕ ಬಹಳ ಪ್ರಯಾಸದಿಂದ ಲೇಖನವನ್ನು ಬರೆಯುತ್ತಿದ್ದರು. ಹೀಗೆ ಲೇಖನವನ್ನು ಕುರಿತ ವಿಶ್ವಾಸವೂ ಮಹತ್ವವೂ ಅವರಿಗೆ ಕ್ರಮಶಃ ಹೆಚ್ಚತೊಡಗಿದವು.

ಕೊನೆಗೆ ಅವರು ತನ್ನ ಲೇಖನವನ್ನು ಯಾರಿಂದಲೋ ಬರೆಸಿ ಚಾರುವಿಗೆ ಕೊಟ್ಟು "ನನ್ನ ಒಬ್ಬ ಗೆಳೆಯನು ಇದೀಗ ಬರೆಯಲಾರಂಭಿಸಿದ್ದಾನೆ. ಅದರಲ್ಲಿ ನನಗೆ ಅಷ್ಟು ತಿಳಿವಳಿಕೆ ಇಲ್ಲ. ನೀನೇ ಒಂದು ಸಲ ಓದಿ ನೋಡು, ಹೇಗಿದೆಯೊ ಏನೊ ?" ಎಂದರು.

ಪ್ರತಿಯನ್ನು ಚಾರುವಿಗೆ ಕೊಟ್ಟು ಭೂಪತಿ ಹೊರಗೆ ಹೋದರು. ಸರಳ ಮನಸ್ಸಿನ ಭೂಪತಿಯ ಈ ವ್ಯವಹಾರವನ್ನು ಅವಳು ಕೂಡಲೆ ತಿಳಿದುಕೊಂಡಳು.

ಚಾರು ಓದಿದಳು ; ಶೈಲಿ ಹಾಗೂ ವಿಷಯವನ್ನು ನೋಡಿ ಅವಳು ತುಸು ನಕ್ಕಳು. ಅಯ್ಯೊ, ಚಾರು ತನ್ನ ಗಂಡನಲ್ಲಿ ಭಕ್ತಿಯನ್ನಿಡಲು ಇಷ್ಟು ಸಿದ್ಧತೆ ಮಾಡಿಕೊಳ್ಳುತ್ತಿದ್ದಾಳೆ. ಮತ್ತೆ ಭೂಪತಿ ಏಕೆ ಹೀಗೆ ಹುಡುಗರಂತೆ ಪೂಜೆಯ ಅರ್ಘ್ಯವನ್ನು ಸುರಿಯುತ್ತಿದ್ದಾರೆ ? ಚಾರುವಿನ ಬಾಯಿಂದ ಭಲೆ ಭಲೆ ಎನ್ನಿಸಿಕೊಳ್ಳಲು ಇಷ್ಟೇಕೆ ಪ್ರಯತ್ನಮಾಡುತ್ತಿದ್ದಾರೆ ? ಅವರು ಏನೂ ಮಾಡಿರದಿದ್ದರೆ, ಚಾರುವಿನ ಮನಸ್ಸನ್ನು ತಮ್ಮ ಕಡೆಗೆ ಎಳೆದುಕೊಳ್ಳಲು ಸರ್ವದಾ ಪ್ರಯಾಸಪಟ್ಟಿರದಿದ್ದರೆ, ಗಂಡನ ಪೂಜೆಯನ್ನು ಮಾಡುವುದು ಚಾರುವಿಗೆ ಸಹಜ ಸಾಧ್ಯವಾಗುತ್ತಿತ್ತು.

ಚಾರು ಬರೆವಣಿಗೆಯ ಪ್ರತಿಯನ್ನು ಸುತ್ತಿ ತಕ್ಕೆಯ ಕೆಳಗೆ ಇಟ್ಟಳು. ಅದರ ಮೇಲೆ, ಗದ್ದಕ್ಕೆ ಕೈ ಇಟ್ಟುಕೊಂಡು ಕುಳಿತು ದೂರದ ವರೆಗೆ ನೋಡುತ್ತ ಏನನ್ನೊ ಯೊಚನೆಮಾಡುತ್ತಿದ್ದಳು. ಅಮಲನೂ ತನ್ನ ಲೇಖನಗಳನ್ನು ಓದಲು ಅವಳಿಗೆ ಕೊಡುತ್ತಿದ್ದ.

ಸಂಜೆಗೆ ಭೂಪತಿ ಉತ್ಸುಕರಾಗಿ ತಮ್ಮ ಶಯನಗೃಹದ ಮುಂದಿನ ಒಳ ಅಂಗಳದಲ್ಲಿಟ್ಟ ಹೂವಿನ ಗಿಡವನ್ನು ನೋಡತೊಡಗಿದರು. ಚಾರುವಿಗೆ ಏನು ಕೇಳಲೂ ಅವರಿಗೆ ಎದೆಯಾಗಲಿಲ್ಲ.

"ಇದು ನಿಮ್ಮ ಗೆಳೆಯನ ಮೊದಲನೆಯ ಲೇಖನವೊ ?"—ಚಾರು

ತಾನೇ ಕೇಳಿದಳು.

“ ಹೂಂ. ”

“ ಬಹಳ ಚನ್ನಾಗಿ ಬರೆದಿದ್ದಾರೆ. ಮೊಟ್ಟಮೊದಲಿನ ಪ್ರಯತ್ನವೆಂಬ ಕಲ್ಪನೆಯೇ ಬರುವುದಿಲ್ಲ. ”

ಭೂಪತಿ ಅತ್ಯಂತ ಪ್ರಸನ್ನರಾದರು. ಒಂದು ಚಿಕ್ಕ ಲೇಖನಕ್ಕೆ ತಮ್ಮ ಹೆಸ-ರನ್ನು ಹೇಳುವುದು ಹೇಗೆ, ಎಂದು ಅವರು ಯೋಚನೆಯಲ್ಲಿ ತೊಡಗಿದರು.

ಅವರು ಬೇಗ-ಬೇಗನೆ ಬರೆದು ಪುಸ್ತಕಗಳ ರಾಶಿಯನ್ನೇ ಹಾಕತೊಡಗಿದರು. ಹೆಸರನ್ನು ಬಯಲಿಗಿಡಲೂ ಬಹಳ ವೇಳೆ ಬೇಕಾಗಲಿಲ್ಲ ಅವರಿಗೆ.

## ೧೭.

ಚಾರು ಯಾವಾಗಲೂ ಇಂಗ್ಲಂಡಿನಿಂದ ಕಾಗದ ಬರುವ ದಿನವನ್ನೇ ಎದುರುನೋಡುತ್ತಿದ್ದಳು. ಮೊದಲು ಅಥೆನ್ಸಿನಿಂದ ಭೂಪತಿಗೆ ಒಂದು ಕಾಗದ ಬಂದಿತು. ಅದರಲ್ಲಿ ಅಮಲನು ಅಕ್ಕನಿಗೆ ನಮಸ್ಕಾರ ಬರೆದಿದ್ದ. ಮತ್ತೆ ಮಾಲ್ಟಾದಿಂದ ಬಂದಿತು. ಅದರಲ್ಲೂ ಅಕ್ಕನಿಗೆ ಪ್ರಣಾಮವಿತ್ತು.

ಚಾರುವಿಗೆ ಮಾತ್ರ ಅಮಲನಿಂದ ಒಂದು ಕಾಗದವೂ ಇಲ್ಲ. ಕೊನೆಗೆ ಅವಳು ಭೂಪತಿಯಿಂದ ಎಲ್ಲ ಕಾಗದಗಳನ್ನು ಇಸಿದುಕೊಂಡು ಅವನ್ನು ತಿರುತಿರುಗಿ ಓದಿದಳು. ತನಗೆ ನಮಸ್ಕಾರವನ್ನುಳಿದು ಮತ್ತಾವ ಸಂಗತಿಯೂ ಅದರಲ್ಲಿ ಇರಲಿಲ್ಲ.

ಇತ್ತ ಹಲವು ದಿನಗಳಿಂದ ಚಾರು ಶಾಂತವಾದ ವಿಷಾದದಿಂದಿರುತ್ತಿದ್ದಳು. ಆದರೆ ಅಮಲನ ಈ ಉಪೇಕ್ಷೆಯಿಂದ ಅವಳು ಛಿನ್ನ-ಭಿನ್ನವಾದಳು. ಅವಳ ಹೃದಯದಲ್ಲಿ ಇನ್ನೊಂದು ಪ್ರಕಾರದ ಘಾತ-ಪ್ರತಿಘಾತವು ಮೊದಲಾಯಿತು. ಅವಳ ಗಾರ್ಹಸ್ಥಿಕ ಕರ್ತವ್ಯದಲ್ಲಿ ಮತ್ತೆ ಭೂಕಂಪದ ಲಕ್ಷಣಗಳು ಕಂಡುಬರತೊಡಗಿದವು.

ಭೂಪತಿ ಒಂದು ದಿನ ಮತ್ತೆ ನಟ್ಟಿರುಳಿನಲ್ಲಿ ಎದ್ದು ನೋಡಿದರು. ಚಾರು ಹಾಸುಗೆಯ ಮೇಲೆ ಇರಲಿಲ್ಲ ! ಇತ್ತ ಅತ್ತ ನೋಡಿದರು. ಅವಳು ದಕ್ಷಿಣದ ತೆರೆದ ಕಿಟಕಿಯ ಹತ್ತಿರ ಕುಳಿತಿದ್ದುದು ಕಂಡಿತು. ಭೂಪತಿಯನ್ನು ನೋಡು

ತ್ತಲೇ ಅವಳು ಚಟ್ಟನೆ ಎದ್ದಳು. "ಇಂದು ಬಹಳ ಸೆಕೆ. ಆದ್ದರಿಂದಲೇ ಇಲ್ಲಿಗೆ ಬಂದು ಸ್ವಲ್ಪ ಗಾಳಿಗೆ ಕುಳಿತುಕೊಂಡಿದ್ದೇನೆ" ಎಂದಳು.

ಭೂಪತಿ ಉದ್ವಿಗ್ನರಾದರು ; ಮಂಚದ ಮೇಲೆ ಬೀಸಣಿಕೆಯನ್ನು ಬೀಸುವ ವ್ಯವಸ್ಥೆ ಮಾಡಿದರು. ಚಾರುವಿನ ದೇಹಸ್ಥಿತಿ ಕೆಡಬಹುದೆಂದು ಆ ಮೇಲೆ ಯಾವಾಗಲೂ ಎಚ್ಚರದಿಂದ ನೋಡುತ್ತಿದ್ದರು.

"ನಾನು ಚನ್ನಾಗಿದ್ದೇನೆ. ಸುಮ್ಮನೆ ನೀವೇಕೆ ಯೋಚನೆ ಮಾಡುತ್ತೀರಿ ?" ಚಾರು ನಕ್ಕು ಹೇಳುತ್ತಿದ್ದಳು.

ಇಷ್ಟು ನಗಬೇಕಾದರೆ ಚಾರು ತನ್ನ ಹೃದಯದ ಎಲ್ಲ ಶಕ್ತಿಗಳನ್ನೂ ಒಟ್ಟುಗೂಡಿಸಿಕೊಳ್ಳಬೇಕಾಗುತ್ತಿತ್ತು.

ಅಮಲನು ಇಂಗ್ಲಂಡಿಗೆ ಹೋಗಿದ್ದಾನೆ. ಬೇರೆ ಕಾಗದ ಬರೆಯಲು ಅವನಿಗೆ ಬಿಡುವು ಸಿಕ್ಕಿರಲಿಲ್ಲವೆಂದು ಚಾರು ಊಹಿಸಿದಳು. ಇಂಗ್ಲಂಡಿಗೆ ಹೋದಮೇಲೆ ವಿಸ್ತಾರವಾದ ಕಾಗದ ಬರೆಯುವನೆಂದು ಅವಳು ತಿಳಿದಿದ್ದಳು. ಆದರೆ ಅವಳ ಬಯಕೆಯಂತೆ ಆ ದೊಡ್ಡ ಕಾಗದವು ಬರಲಿಲ್ಲ.

ಇಂಗ್ಲಂಡಿನಿಂದ ಕಾಗದ ಬರುವ ದಿನ ಚಾರು ಕೆಲಸ ಮಾಡುವಾಗ, ಮಾತನಾಡುವಾಗ ಅಧೀರಳಾಗಿಯೇ ಇರುತ್ತಿದ್ದಳು. 'ನಿನಗೆ ಯಾವ ಕಾಗದವೂ ಇಲ್ಲ'—ಎಂದು ರಾಯರು ಹೇಳಿದರೆ ಏನು ಮಾಡುವುದು ಎಂಬ ಸಂಶಯದಿಂದ ಅವಳು ರಾಯರನ್ನು ಕೇಳುತ್ತಿರಲಿಲ್ಲ.

ಹೀಗಿರುವಾಗ ಒಂದು ದಿನ, ಇಂಗ್ಲಂಡಿನಿಂದ ಕಾಗದ ಬರಬೇಕಾದ ದಿನ, ಭೂಪತಿ ಮೆಲ್ಲಗೆ ಒಳಗೆ ಬಂದರು. ಮುಗುಳುನಗೆ ನಗುತ್ತ— "ಒಂದು ಸಾಮಾನು ತಂದಿದ್ದೇನೆ, ನೋಡುವೆಯಾ ?" ಎಂದರು.

"ಎಲ್ಲಿದೆ ?" ಚಾರು ಅತ್ಯಂತ ಆಸಕ್ತಿಯಿಂದ ಕೇಳಿದಳು.

ಭೂಪತಿ ಹುಡುಗಾಟಿಕೆ ಮಾಡುತ್ತ ತೋರಿಸಲಿಚ್ಛಿಸಲಿಲ್ಲ.

ಚಾರು ಅಧೀರಳಾಗಿ ಭೂಪತಿಯ ಶಾಲಿನೊಳಗಿದ್ದ ಸಾಮಾನನ್ನು ಕಸಿದುಕೊಳ್ಳಲು ಯತ್ನಿಸಿದಳು. 'ಇಂದು ನಿನ್ನ ಕಾಗದ ಬರುವುದೆಂದು ಬೆಳಗಿನಿಂದಲೇ ನನ್ನ ಮನಸ್ಸು ಹೇಳುತ್ತಿದೆ. ಅದು ಎಂದಾದರೂ ವ್ಯರ್ಥವಾಗಬಹುದೆ !' ಎಂದು ಅವಳು ಮನಸ್ಸಿನೊಳಗೇ ಯೋಚಿಸತೊಡಗಿದಳು.

ಭೂಪತಿಗೆ ಈ ಹಾಸ್ಯದಿಂದ ಮೋಜೆನಿಸಿತು ; ಅವರು ಈ ಹುಡುಗಾಟಿಕೆಯನ್ನು ಇನ್ನೂ ಕೊಂಚ ಮುಂದುವರಿಸಲು ಹಾಗೆಯೇ ಸುತ್ತಲೂ ತಿರುಗ

ಲಾರಂಭಿಸಿದರು. ಚಾರು ಅವರನ್ನೇ ಹಿಂಬಾಲಿಸುತ್ತಲಿದ್ದಳು.

ಕೊನೆಗೆ ಚಾರು ಅಪ್ರಸನ್ನಳಾಗಿ ಮಂಚದ ಮೇಲೆ ಕುಳಿತುಕೊಂಡಳು. ಅವಳ ಕಣ್ಣುಗಳಲ್ಲಿ ನೀರೂರಿತು.

ಚಾರುವಿನ ಈ ಆಗ್ರಹವನ್ನು ನೋಡಿ ಭೂಪತಿಗೆ ಬಹಳ ಸಂತೋಷವಾಯಿತು. ಕೊನೆಗೆ ತಾವು ಬರೆದ ಲೇಖನವನ್ನು ಕೂಡಲೇ ಶಾಲಿನಿಂದ ಹೊರಗೆ ತೆಗೆದು ಚಾರುವಿನ ತೊಡೆಯಮೇಲಿಟ್ಟು— "ಬೇಸರಪಡಬೇಡ, ಇದೋ ಹಿಡಿ!" ಎಂದರು.

೧೮

ಓದಿನಲ್ಲಿ ತೊಡಗಿದ್ದುದರಿಂದ ಬೇಗನೇ ಕಾಗದ ಬರೆಯಲು ಅನುಕೂಲವಾಗಲಾರದೆಂದು ಭೂಪತಿಗೆ ಅಮಲನು ಬರೆದಿದ್ದ. ಆದರೂ ಮತ್ತೆ ಕಾಗದ ಬರಲು ಸ್ವಲ್ಪ ತಡವಾದುದರಿಂದ ಚಾರುವಿನ ಪಾಲಿಗೆ ಮನೆಯು ಹಾವಿನ ಹುತ್ತವಾಯಿತು.

"ಇದು ನೋಡಿ, ಇಂಗ್ಲಂಡಿಗೆ ಒಂದು ತಂತಿಕೊಟ್ಟು ಅಮಲನ ಯೋಗಕ್ಷೇಮವನ್ನು ತಿಳಿದುಕೊಳ್ಳಿ"—ಹೊತ್ತು ಮುಳುಗಿದ ಮೇಲೆ ಚಾರು ಮಾತಿಗೆ ಮಾತು ಹೊರಟಾಗ ಅತ್ಯಂತ ಉದಾಸೀನ ಭಾವದಿಂದ ಶಾಂತ ಸ್ವರದಿಂದ ಗಂಡನಿಗೆ ಹೇಳಿದಳು.

"ಅವನ ಕಾಗದ ಬಂದು ಎರಡು ವಾರವಾಯಿತು. ಈಗ ಆತನು ಓದಿನಲ್ಲಿ ತೊಡಗಿದ್ದಾನೆ" ಎಂದರು ರಾಯರು.

"ಸರಿ. ಹಾಗಾದರೆ ಬಿಡಿ. ದೂರದೇಶದಲ್ಲಿದ್ದಾನೆ. ಬೇನೆಗೀನೆ ಬಿದ್ದಿರಬಹುದೆಂದು ತಿಳಿದಿದ್ದೆ. ಊರಿಗೆ ಹೋದವರ ಸ್ಥಿತಿಯನ್ನು ಹೇಗೆ ಹೇಳುವುದು?"

"ಹಾಗೇನೂ ಇರಲಾರದು. ಬೇನೆ ಬಿದ್ದಿದ್ದರೆ ತಿಳಿಸದೆ ಇರುತ್ತಿರಲಿಲ್ಲ. ತಂತಿ ಕಳಿಸಿದರೆ ವೆಚ್ಚವೇನೂ ಕಡಿಮೆ ಬರುವುದಿಲ್ಲ."

"ಬಹಳ ವೆಚ್ಚ ಬರುವುದೆ? ಬಹಳವೆಂದರೆ ಒಂದೆರಡು ರೂಪಾಯಿ ಬೇಕಾಗಬಹುದೆಂದು ತಿಳಿದಿದ್ದೆ."

"ಏನೆಂದೆ! ಸುಮಾರು ನೂರು ರೂಪಾಯಿ ಬೇಕು!"

"ಅಬ್ಬಾ!" ಎಂದಳು ಚಾರು.

"ನನ್ನ ತಂಗಿ ಈಗ ಚುಂಡಾದಲ್ಲಿದ್ದಾಳೆ. ಹೇಗಿದ್ದಾಳೊ ಏನೊ? ಹೋಗಿ ನೋಡಿಕೊಂಡು ಬರುವಿರಾ?"— ಎರಡು ದಿನಗಳ ತರುವಾಯ ಚಾರು ರಾಯರಿಗೆ ಹೇಳಿದಳು.

"ಏಕೆ, ಅವಳ ಆರೋಗ್ಯ ಚನ್ನಾಗಿಲ್ಲವೆ?"

"ಹಾಗೇನೂ ಇಲ್ಲ,—ನಿಮಗೆ ಗೊತ್ತೇ ಇದೆ, ನೀವು ಹೋದರೆ ಅವರು ಬಹಳ ಸಂತೋಷಪಡುವರು!"

ಭೂಪತಿ ಚಾರುವಿನ ಅನುರೋಧದಿಂದ ಜಟ್‌ಕಾದಲ್ಲಿ ಕುಳಿತುಕೊಂಡು ಹಾಬ್‌ಡಾ ಸ್ಟೇಶನ್ ಮುಟ್ಟಿದರು. ದಾರಿಯುದ್ದಕ್ಕೂ ಚಕ್ಕಡಿಗಳ ಸಾಲೇ ಹೊರಟಿದ್ದಿತು. ಆದರಿಂದ ಅವರ ಜಟ್‌ಕಾ ತುಸು ಹೊತ್ತು ನಿಲ್ಲಬೇಕಾಯಿತು.

ಇಷ್ಟರಲ್ಲಿ ಪರಿಚಯದ ಒಬ್ಬ ಟೆಲಿಗ್ರಾಫ್ ಪ್ಯೂನ್ ಅತ್ತಣಿಂದ ಹೋಗುತ್ತಿದ್ದ. ಭೂಪತಿರಾಯರನ್ನು ನೋಡಿ ಅವನು ಒಂದು ಟೆಲಿಗ್ರಾಮ್ ತಂದು ಕೊಟ್ಟ. ಇಂಗ್ಲಂಡಿನ ಟೆಲಿಗ್ರಾಮ್ ನೋಡಿ ರಾಯರು ಒಮ್ಮೆಲೆ ಗಾಬರಿಯಾದರು. ಬಹುಶಃ ಅಮಲನು ಬೇನೆಯಿಂದ ಮಲಗಿರುವನೆಂದು ಬಗೆದರು. ಆ ತಂತಿಯಲ್ಲಿ—"ನಾನು ಚನ್ನಾಗಿದ್ದೇನೆ" ಎಂದು ಬರೆದಿತ್ತು.

ಇದರ ಅರ್ಥವೇನು? ಅವರು ಅದನ್ನು ಆ ಕಡೆ ಈ ಕಡೆ ತಿರುಗಿಸಿ ನೋಡಿದರು. ಪ್ರಿ-ಪೇಡ್ ಟೆಲಿಗ್ರಾಮಿನ ಉತ್ತರ!

ರಾಯರು ಹಾಬ್‌ಡಾ ಸ್ಟೇಶನ್ನಿಗೆ ಹೋಗಲಿಲ್ಲ. ಜಟ್‌ಕಾವನ್ನು ಹಿಂದಿರುಗಿಸಿದರು. ಮನೆಗೆ ಬಂದು ಹೆಂಡತಿಯ ಕೈಯಲ್ಲಿ ತಂತಿ ಇಟ್ಟರು. ಭೂಪತಿಯ ಕೈಯಲ್ಲಿದ್ದ ತಂತಿ ನೋಡಿದಾಗಲೇ ಚಾರುವಿನ ಕೈಕಾಲು ತಣ್ಣಗಾದವು!

"ಇದರ ಗುಟ್ಟೇ ನನಗೆ ತಿಳಿಯದಂತಾಗಿದೆ!" ಎಂದರು ರಾಯರು.

ಅನುಸಂಧಾನವಾದಮೇಲೆ ಇದರ ಮರ್ಮವು ರಾಯರಿಗೆ ಗೊತ್ತಾಯಿತು. ಚಾರು ತನ್ನ ಆಭರಣವನ್ನು ಒತ್ತೆ ಇಟ್ಟು ಆರು ರೂಪಾಯಿ ವೆಚ್ಚಮಾಡಿ ಪ್ರತ್ಯುತ್ತರ ಬರುವ ತಂತಿ ಕಳಿಸಿದ್ದಳು.

ಭೂಪತಿ ಯೋಚನೆಗೆ ಒಳಗಾದರು. ಇಷ್ಟು ಮಾಡುವ ಅವಶ್ಯಕತೆ ಏನಿತ್ತು? ಹೆಚ್ಚು ಆಗ್ರಹ ಮಾಡಿದ್ದರೆ ನಾನೇ ತಂತಿಕಳಿಸುತ್ತಿದ್ದೆ. ಮನೆಯ ಆಳಿಗೆ ಹೇಳಿ, ಗುಟ್ಟನಿಂದ ಪೇಟಿಯಲ್ಲಿ ಆಭರಣಗಳನ್ನು ಒತ್ತೆ ಇಡುವುದು ಯೋಗ್ಯವೆ?

"ಚಾರು ಇಷ್ಟೇಕೆ ದುಡುಕಿದಳು ?"—ರಾಯರ ಮನಸ್ಸಿನಲ್ಲಿ ಆಗಿಂದಾಗ ತಡೆತಡೆದು ಬರಿಯ ಇದೇ ಪ್ರಶ್ನೆ ಏಳುತ್ತಿದ್ದಿತು. ಒಂದು ಅಸ್ಪಷ್ಟ ಸಂಶಯವು ಅವರ ಹೃದಯವನ್ನು ಅಜ್ಞಾತರೂಪದಿಂದ ಇರಿಯಲಾರಂಭಿಸಿತು. ಆ ಸಂಶಯವನ್ನು ರಾಯರು ಕಣ್ಮುಟ್ಟಿ ನೋಡಲಿಚ್ಛಿಸಲಿಲ್ಲ. ಅವರು ಅದನ್ನು ಮರೆಯಲು ಯತ್ನಿಸಿದರು. ಆದರೆ ವೇದನೆ ಮಾತ್ರ ಅವರ ಬೆನ್ನು ಬಿಡಲಿಲ್ಲ.

೧೯

ಅಮಲನು ಆರೋಗ್ಯವಾಗಿದ್ದಾನೆ. ಆದರೂ ಕಾಗದವನ್ನೇಕೆ ಬರೆಯುವು ದಿಲ್ಲ? ಒಮ್ಮೆಲೇ ಹೀಗೆ ಕಠೋರತನದಿಂದ ಸಂಬಂಧವಿಚ್ಛೇದನೆ ಹೇಗೆ ಆಯಿತು ? ಒಮ್ಮೆ ಹೋಗಿ ಈ ಪ್ರಶ್ನೆಗೆ ಉತ್ತರ ತರಬೇಕೆಂದು ಮನಸ್ಸಾಗು ತ್ತದೆ. ಆದರೇನು, ನಡುವೆ ಅಪಾರ ಸಮುದ್ರವಿದೆ. ದಾಟಲು ಬೇರೆ ಮಾರ್ಗ ವಿಲ್ಲ! ಈ ನಿಷ್ಠುರ ವಿಚ್ಛೇದ, ಈ ನಿರುಪಾಯ ವಿಚ್ಛೇದ! ಇದು ಎಲ್ಲ ಬಗೆ ಯಿಂದಲೂ ಹಾನಿಕಾರಕವಾಗಿದ್ದಿತು.

ಚಾರು ಭ್ರಮೆಗೊಳಗಾದಳು. ಕೆಲಸ ಬೊಗಸೆ ಹಾಗೆಯೇ ಉಳಿದಿರುತ್ತವೆ. ಅವಳು ಕೆಲಸಗಳಲ್ಲಿಯೂ ತಪ್ಪು ಮಾಡುತ್ತಾಳೆ. ಆಳುಹೋಳುಗಳು ಕಣ್ಣು ತಪ್ಪಿಸಿ ಕಳವು ಮಾಡಿಕೊಂಡು ಹೋಗುತ್ತಾರೆ; ಜನರು ಅವಳ ದೈನ್ಯಾವಸ್ಥೆ ಯನ್ನು ನೋಡಿ ಗುಸುಗುಸು ಮಾತನಾಡುತ್ತಾರೆ. ಆದರೂ ಅವಳು ಚೇತರಿಸಿಕೊಳ್ಳುವುದಿಲ್ಲ.

ಆ ಮೇಲೆ ಅವಳು ಒಮ್ಮೆಲೆ ಮೆಟ್ಟಿಬೀಳುತ್ತಿಲಿದ್ದಳು. ಮಾತನಾಡು ತ್ತಿರುವಾಗಲೇ ಎದ್ದು ಏಕಾಂತ ಸ್ಥಳಕ್ಕೆ ಹೋಗುತ್ತಿದ್ದಳು ಅಮಲನ ಹೆಸರು ಕೇಳುತ್ತಲೇ ಅವಳ ಮೋರೆ ಸಪ್ಪಗಾಗುತ್ತಿತ್ತು.

ಕೊನೆಗೆ ಭೂಪತಿ ಎಲ್ಲ ಸಂಗತಿಯನ್ನು ತಿಳಿದುಕೊಂಡರು. ಒಂದು ಕ್ಷಣವೂ ಆಲೋಚನೆಗೆ ಅವಕಾಶವಿಲ್ಲದಂತಹ ಒಂದು ಮಾತನ್ನು ಅವರು ಈಗ ಯೋಚನೆ ಮಾಡಬೇಕಾಯಿತು. ಪ್ರಪಂಚವು ಅವರ ಪಾಲಿಗೆ ಒಮ್ಮೆಲೇ ವೃದ್ಧ, ಶುಷ್ಕ ಹಾಗೂ ಜೀರ್ಣವಾಯಿತು.

ನಡುವೆ ಕೆಲವು ದಿನ ರಾಯರು ಆನಂದದ ಉನ್ಮೇಷದಲ್ಲಿರುತ್ತಿದ್ದರು.

ಆದರೆ ಆ ಸ್ಮೃತಿ ಅವರನ್ನು ನಾಚಿಸಿತು. ಮಾಣಿಕದ ಬೆಲೆಯನ್ನರಿಯದ ಮಂಗನ ಕೈಗೇಕಲ್ಲು ಕೊಟ್ಟು ಮೋಸಮಾಡಬೇಕೆ?

ಚಾರುವಿನ ಪ್ರೇಮವ್ಯವಹಾರಗಳಿಂದ ರಾಯರು ಉಬ್ಬಿ-ಉಬ್ಬಿ ತಿರುಗಾಡುತ್ತಿದ್ದರು. ನೆನಪಿಗೆ ಬಂದ ಆ ಸಂಗತಿ ಅವರಿಗೆ "ಮೂರ್ಖ, ಮೂರ್ಖ, ಮೂರ್ಖ" ಎಂದು ಏಟು ಹಾಕತೊಡಗಿತು.

ಕೊನೆಗೆ ಅವರಿಗೆ ತಮ್ಮ ಲೇಖನಗಳ ನೆನಪಾಯಿತು. ಆಗ ಅವರು ಧರಣಿಗೆ ವಿದೀರ್ಣವಾಗಲು ಹೇಳಿದರು. ಅವರು ಅಂಕುಶ ತಾಡಿತರಂತೆ ಲಗುಬಗೆಯಿಂದ ಚಾರುವಿನ ಬಳಿಗೆ ಬಂದು "ನನ್ನ ಆ ಲೇಖನಗಳೆಲ್ಲಿ?" ಎಂದು ಕೇಳಿದರು.

"ನನ್ನಲ್ಲಿವೆ."

"ಅವನ್ನು ಕೊಡು."

ಚಾರು ಆಗ ರಾಯರಿಗೆ ಮೊಟ್ಟೆಯ ಒಡೆ ಮಾಡುತ್ತಿದ್ದಳು. ಅವಳು "ಈಗಲೇ ಬೇಕೇ?" ಎಂದು ಕೇಳಿದಳು.

"ಹೂಂ, ಈಗಲೇ ಬೇಕು."

ಅವಳು ನಾಲ್ಕು ಒಡೆಗಳನ್ನು ಮಾಡಿ ತೆಗೆದಿಟ್ಟು ಲೇಖನಗಳನ್ನು ತರಲು ಹೋದಳು.

ಭೂಪತಿ ಅಧೀರತೆಯಿಂದ ಅವಳ ಕೈಯೊಳಗಿನ ಲೇಖನಗಳನ್ನೆಲ್ಲ ಕಸಿದುಕೊಂಡು ಚಟ್ಟನೆ ಒಲೆಗೆ ಹಾಕಿದರು.

"ನೀವು ಇದನ್ನೇನು ಮಾಡಿದಿರಿ?" ಎನ್ನುತ್ತ ಚಾರು ಅವನ್ನು ತೆಗೆಯಲು ಯತ್ನಿಸುವಷ್ಟರಲ್ಲಿ ಲೇಖನಗಳೆಲ್ಲ ಸುಟ್ಟು ಬೂದಿಯಾಗಿದ್ದವು.

ಚಾರು ಅರ್ಥಮಾಡಿಕೊಂಡಳು. ಅವಳು ಒಂದು ನಿಟ್ಟುಸಿರು ಬಿಟ್ಟು ಮತ್ತೆ ಒಡೆ ಮಾಡುವುದನ್ನು ಅಷ್ಟಕ್ಕೇ ನಿಲ್ಲಿಸಿ ಮೆಲ್ಲಮೆಲ್ಲಗೆ ಬೇರೆ ಕಡೆಗೆ ಹೋದಳು.

ಚಾರುವಿನ ಎದುರಿಗೇ ಲೇಖನಗಳನ್ನು ನಾಶಪಡಿಸಬೇಕೆಂದು ಭೂಪತಿ ಯೋಚಿಸಿರಲಿಲ್ಲ. ಆದರೆ, ಎದುರಿಗೇ ಒಲೆ ಉರಿಯುತ್ತಿತ್ತು. ಅದನ್ನು ನೋಡಿದಾಕ್ಷಣವೇ ಅವರ ತಲೆಗೆ ಪಿತ್ತವೇರಿತು! ಭೂಪತಿಗೆ ತಡೆಯುವುದಾಗಲಿಲ್ಲ. ವಂಚಕಿಯ ಎದುರಿಗೇ ಅದನ್ನೆಲ್ಲ ಅಗ್ನಿಗೆ ಅರ್ಪಿಸಿದರು.

ಎಲ್ಲವೂ ಸುಟ್ಟು ಬೂದಿಯಾಯಿತು. ಅಲ್ಲಿಗೆ ಭೂಪತಿಯ ಆಕಸ್ಮಿಕ

ಉಗ್ರತಸವು ಶಾಂತವಾಯಿತು. ಚಾರು ತನ್ನ ತಪ್ಪಿನ ಗಂಟನ್ನು ತಲೆಯ ಮೇಲಿಟ್ಟುಕೊಂಡು ಗಂಭೀರ ವಿಷಾದದಿಂದ ಸುಮ್ಮನೆ ನೆಲ ನೋಡುತ್ತ ಹೋದುದು ಆ ಮೇಲೆ ರಾಯರಿಗೆ ಜ್ಞಾಪಕಕ್ಕೆ ಬಂದಿತು. ಮತ್ತೆ ಮುಂದೆ ನೋಡಿ ಅವರು ಯೋಚಿಸತೊಡಗಿದರು-ನನಗೆ ಹೊಟ್ಟೆಯು ಒಡೆ ಸೇರುತ್ತವೆ. ಆದ್ದರಿಂದಲೇ ಚಾರು ಅವನ್ನು ಮನಸ್ಸುಗೊಟ್ಟು ಮಾಡುತ್ತಿದ್ದಳು.

ಭೂಪತಿ ಹೊರಗೆ ಹೋಗಿ ರೇಲಿಂಗಿನ ಮೇಲೆ ಬಾಗಿ ನಿಂತುಕೊಂಡು ಮನಸ್ಸಿನೊಳಗೇ ಯೋಚಿಸತೊಡಗಿದರು— " ಅಯ್ಯೊ, ಅಬಲೆ, ದುಃಖಿನಿ ! ಇದೆಲ್ಲ ನನಗೆ ಬೇಕಾಗಿರಲಿಲ್ಲ. ಇಷ್ಟು ದಿನ ನನಗೆ ಪ್ರೇಮವು ಸಿಗದಿದ್ದರೂ ' ಸಿಗಲಿಲ್ಲ ' ಎಂದು ನಾನು ಮರುಗಲಿಲ್ಲ. ನಾನು ಲೇಖನ ಬರೆಯುವುದರಲ್ಲಿ ಪ್ರೂಫ್ ನೋಡುವುದರಲ್ಲಿ ಹೊತ್ತುಗಳೆಯುತ್ತಿದ್ದೆ. ನಾನಿಷ್ಟು ಪ್ರಯತ್ನ ಪಡುವ ಅವಶ್ಯಕತೆಯೇ ಇರಲಿಲ್ಲ ! "

ಆ ಮೇಲೆ ಅವರು ಚಾರುವಿನಿಂದ ದೂರ ಸರಿದರು-ಡಾಕ್ಟರನು ಭಯಂಕರ ರೋಗಗ್ರಸ್ತ ರೋಗಿಯನ್ನು ನೋಡುವಂತೆ— ಅವಳನ್ನು ನಿಃಸಂಪರ್ಕ ವ್ಯಕ್ತಿಗೆ ಸಮನಾಗಿ ನೋಡಲಾರಂಭಿಸಿದರು. ಆ ಕ್ಷೀಣ ಶಕ್ತಿಯ ನಾರೀಹೃದಯವು ಪ್ರಬಲ ಸಂಸ್ಕಾರದಿಂದ ನಾಲ್ಕು ನಿಟ್ಟಿನಿಂದಲೂ ಆಕ್ರಾಂತವಾಗಿದೆ ಎಲ್ಲ ಸಂಗತಿಯನ್ನು ಕೇಳುವಂತಹ ಆತ್ಮೀಯ ಜನರಿಲ್ಲ, ಹೇಳುವ ಮಾತುಗಳೂ ಅವು ಅಲ್ಲ. ಹೃದಯದಲ್ಲಿ ಹುದುಗಿಕೊಂಡದ್ದನ್ನು ಕಾರಿಕೊಂಡು ಹೃದಯವನ್ನು ಹಾಯಾಗ ಮಾಡಿಕೊಳ್ಳುವಂತಹ ಯೋಗ್ಯ ಸ್ಥಳವೂ ಇಲ್ಲ. ಆದರೂ ಆಕೆಳು ಈ ಅಪ್ರಕಾಶ್ಯ, ಅಪರಿಹಾರ್ಯ, ಅಪ್ರತಿವಿಧೇಯವಾದ ಪುಂಜೀಭೂತ ದುಃಖಭಾರವನ್ನು ಪ್ರತಿದಿನವೂ ಸಹನಮಾಡುತ್ತ ಸಹಜ ಸ್ವಾಭಾವಿಕ ಸ್ತ್ರೀಯರಂತೆ, ತನ್ನ ಸ್ವಸ್ಥ ಚಿತ್ತದ ನೆರೆಹೊರೆಯ ನಾರಿಯರಂತೆ, ತನ್ನ ಮನೆಮಾರನ್ನು ನೋಡಿಕೊಳ್ಳಬೇಕಾಗುತ್ತದೆ.

ಭೂಪತಿ ತಾವು ಮಲಗುವ ಕೋಣೆಗೆ ಹೋಗಿ ನೋಡಿದರು— ಚಾರು ನೆಲದ ಮೇಲೆ ಕುಳಿತುಕೊಂಡು ಅಶ್ರುಹೀನ ದೃಷ್ಟಿಯಿಂದ ಎವೆಯಿಕ್ಕದೆ ಹೊರಗೆ ನೋಡುತ್ತಿದ್ದಾಳೆ. ಭೂಪತಿ ಮೆಲ್ಲಡಿಯಿಂದ ಹೋಗಿ ಅವಳ ಹಿಂದೆ ನಿಂತುಕೊಂಡರು, ಏನೂ ಮಾತನಾಡಲಿಲ್ಲ. ಅವಳ ತಲೆಯಮೇಲೆ ಕೈಯನ್ನಿಟ್ಟು ನಿಂತುಕೊಂಡರು.

" ಮತ್ತೇನು ರಾಯರೆ? ಯಾವುದೋ ಕೆಲಸದಲ್ಲಿ ತೊಡಗಿದಂತೆ ಕಾಣುತ್ತದೆ?" —ಗೆಳೆಯರು ಭೂಪತಿರಾಯರಿಗೆ ಕೇಳಿದರು.

" ಪತ್ರಿಕೆ."

" ಮತ್ತೆ ಅದೇ ಪತ್ರಿಕೆಯ ಕೆಲಸವೆ? ಮನೆ ಮಾರು ಎಲ್ಲವನ್ನೂ ಪತ್ರಿಕೆಯ ಸಲುವಾಗಿ ಹರಾಜು ಮಾಡಬೇಕೆನ್ನುತ್ತೀರಾ?"

" ಇಲ್ಲ, ಈ ಸಲ ನಾನೊಬ್ಬನೇ ಹೊರಡಿಸುವುದಿಲ್ಲ."

" ಎಂದರೆ?"

· ಮೈಸೂರಿನಲ್ಲಿ ಒಂದು ಪತ್ರಿಕೆ ಹೊರಡುವುದಿದೆ. ನನ್ನನ್ನು ಅದರ ಸಂಪಾದಕನೆಂದು ಅವರು ಒಪ್ಪಿಕೊಂಡಿದ್ದಾರೆ."

" ಮನೆಮಾರು ಬಿಟ್ಟು ಒಮ್ಮೆಲೇ ಮೈಸೂರಿಗೆ ಹೋಗುವಿರಾ? ಚಾರುವನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವಿರಾ?"

" ಇಲ್ಲ, ಮಾವ ಇಲ್ಲವೆ ಬೇರೆ ಯಾರಾದರೂ ಬಂದು ಇರುವರು."

" ಸಂಪಾದಕರಾಗಬೇಕೆಂಬ ಹಂಬಲು ಇನ್ನೂ ನಿಮ್ಮನ್ನು ಬಿಡಲಿಲ್ಲವೆಂದು ತೋರುತ್ತದೆ?"

" ಮನುಷ್ಯನು ಯಾವುದಾದರೂ ಒಂದಕ್ಕೆ ಅಂಟಿಕೊಳ್ಳಬೇಕಲ್ಲವೆ?"

* * * *

" ಯಾವಾಗ ಬರುವಿರಿ?" –ರಾಯರು ಹೋಗುವಾಗ ಚಾರು ಕೇಳಿದಳು.

" ನಿನಗೆ ಬೇಸರವೆನಿಸಿದಾಗ ಕಾಗದ ಬರೆ, ಆಗಿಂದಾಗ ಬರುತ್ತೇನೆ" ಎಂದು ಭೂಪತಿ ಬಾಗಿಲ ವರೆಗೆ ಬಂದರು. ಆಗಲೇ ಚಾರು ಒಮ್ಮೆಲೆ ಓಡುತ್ತ ಬಂದು "ನನ್ನನ್ನೂ ನಿಮ್ಮ ಕೂಡ ಕರೆದುಕೊಂಡು ನಡೆಯಿರಿ. ನನ್ನನ್ನಿಲ್ಲಿ ಬಿಟ್ಟು ಹೋಗಬೇಡಿ" ರಾಯರ ಕೈಯನ್ನು ಹಿಡಿದು ಹೇಳಿದಳು.

ಭೂಪತಿ ಬೆಪ್ಪಾಗಿ ಚಾರುವಿನ ಮೋರೆಯನ್ನೇ ನೋಡುತ್ತ ನಿಂತರು. ಮುಷ್ಟಿ ಸಡಿಲಾದುದರಿಂದ ಚಾರುವಿನ ಕೈ ಅವರ ಕೈಯೊಳಗಿಂದ ಜಾರಿತು. ಆಗ ಅವರು ಚಾರುವನ್ನು ಬಿಟ್ಟು ವರಾಂಡಕ್ಕೆಬಂದು ಯೋಚಿಸುತ್ತ ನಿಂತರು:-

"ಆಮೂಲನ ವಿಚ್ಛೇದಸ್ಮೃತಿ ಈ ಮನೆಯನ್ನು ವ್ಯಾಪಿಸಿದೆ. ಚಾರು ದಾವಾನಲಗ್ರಸ್ತ ಹರಿಣಿಯಂತೆ ಈ ಮನೆಯನ್ನು ಬಿಟ್ಟು ಓಡಿಹೋಗಲಿಚ್ಛಿಸುತ್ತಾಳೆ; ಆದರೆ ನನ್ನನ್ನು ಕುರಿತು ಅವಳು ಒಮ್ಮೆಯೂ ಯೋಚನೆ ಮಾಡಲಿಲ್ಲ. ನಾನೆಲ್ಲಿಗೆ ಓಡಿ ಹೋಗಲಿ? ತನ್ನ ಹೃದಯದಲ್ಲಿ ನಿರಂತರವಾಗಿ ಮತ್ತೊಬ್ಬನನ್ನು ಧ್ಯಾನಮಾಡುವ ಸ್ತ್ರೀ, ಪರದೇಶಕ್ಕೆ ಹೋದರೂ ಅವನನ್ನು ಮರೆಯಲಪೇಕ್ಷಿಸುವುದಿಲ್ಲ! ನಿರ್ಜನ ಬಂಧುಹೀನ ಪ್ರವಾಸದಲ್ಲಿ ದಿನವೂ ಅವಳ ಬಳಿ ಇರಬೇಕಾಗುವುದು! ಹಗಲೆಲ್ಲ ಪರಿಶ್ರಮ ಮಾಡಿ ಸಂಜೆಗೆ ಮರಳುವೆ. ಆಗ, ನಿಸ್ತಬ್ಧ ಶೋಕಾಕುಲ ನಾರಿಯ ಜೊತೆಗೆ ಅಂತಹ ರಾತ್ರಿಯನ್ನು ಕಳೆಯುವುದು ಬಹಳ ಕಷ್ಟದ ಮಾತಾಗುವುದು. ಭಾರ ಹೃದಯದವರನ್ನು ಎಲ್ಲಿಯವರೆಗೆ ಹತ್ತಿರ ಇಟ್ಟುಕೊಳ್ಳಲು ಸಾಧ್ಯವಿದೆ? ಆಶ್ರಯವಿಹೀನರನ್ನು ಹೆಗಲ ಮೇಲೆ ಹೊತ್ತುಕೊಂಡು ಹೋಗಬೇಕಾಗುವುದು!"

"ಬೇಡ, ಇದು ನನ್ನಿಂದಾಗದ ಮಾತು!" ಎಂದರು ಅವರು.

ಕ್ಷಣಮಾತ್ರದಲ್ಲಿಯೇ ಚಾರುವಿನ ಮೋರೆ ಕಳೆಗುಂದಿತು. ಅವಳು ಮಂಚದ ಕಾಲು ಹಿಡಿದುಕೊಂಡು ಹೇಗೋ ನಿಂತಿದ್ದಳು.

"ಚಾರು ನಡೆ, ನನ್ನ ಜೊತೆಗೇ ನಡೆ"—ಆ ಕ್ಷಣದಲ್ಲಿಯೇ ಭೂಪತಿ ಹೇಳಿದರು.

"ಬೇಡ, ಇರಲಿ ಬಿಡಿ" ಎಂದಳು ಚಾರು.



# ಪುತ್ರಯಜ್ಞ

ಬೈಜನಾಥರು ಬಹಳ ಅನುಭವಿಕರೆಂದು ಊರಿನ ಜನರೆಲ್ಲ ತಿಳಿದಿದ್ದರು. ಆದ್ದರಿಂದ ಅವರು ಭವಿಷ್ಯವನ್ನು ಕುರಿತು ಗಮನದಲ್ಲಿಟ್ಟುಕೊಂಡೇ ತತ್ಕಾಲದ ಕೆಲಸವನ್ನು ಮಾಡುತ್ತಿದ್ದರು. ಅವರು ಮದುವೆಯಾದಾಗ ಅಂದಿನ ಹೊಸ ಹೆಂಡತಿಗಿಂತಲೂ ಮುಂದಿನ ಮಗನ ಮೋರೆಯೇ ಅವರಿಗೆ ಹೆಚ್ಚು ನಿಚ್ಚಳವಾಗಿ ಕಂಡಿತ್ತು. ಮದುವೆಯಲ್ಲಿ ವಧೂವರರು ಪರಸ್ಪರರು ನೋಡುವಾಗ ದೃಷ್ಟಿ ಇಷ್ಟು ದೂರದವರೆಗೆ ಹೋಗುವುದಿಲ್ಲ. ಬೈಜನಾಥರು ವ್ಯವಹಾರ ಕುಶಲರು. ಪ್ರೇಮಕ್ಕಿಂತ ಪಿಂಡದ ಕಡೆಗೇ ಹೆಚ್ಚು ಲಕ್ಷ್ಯಕೊಟ್ಟಿದ್ದರು; ಮತ್ತು 'ಪುತ್ರಾರ್ಥೇ ಕ್ರಿಯತೇ ಭಾರ್ಯಾ' ಎಂಬ ಸೂತ್ರವನ್ನನುಸರಿಸಿಯೇ ಅವರು ವಿನೋದಿನಿಯ ಕೈಹಿಡಿದಿದ್ದರು.

ಆದರೆ ಪ್ರಪಂಚದಲ್ಲಿ ಒಮ್ಮೊಮ್ಮೆ ವ್ಯವಹಾರಕುಶಲನೂ ಮಣ್ಣು ಮುಕ್ಕುತ್ತಾನೆ. ವಿನೋದಿನಿ ಹರಯದ ಹೊಸ್ತಿಲೊಳಗೆ ಕಾಲಿಟ್ಟಳು. ಆದರೂ ಅವಳು ತನ್ನ ಸರ್ವಪ್ರಧಾನ ಕರ್ತವ್ಯವನ್ನು ಪಾಲಿಸಿರಲಿಲ್ಲ. ಆದ್ದರಿಂದ ಪುನ್ನಾಮನರಕದ ಬಾಗಿಲು ತೆರೆದುದನ್ನು ನೋಡಿ ಬೈಜನಾಥರು ಬಹಳ ಚಿಂತೆಗೊಳಗಾದರು. ಸತ್ತ ಮೇಲೆ ಅವರ ವಿಪುಲ ಐಶ್ವರ್ಯವನ್ನು ಭೋಗಿಸುವವರು ಯಾರು? ಈ ಚಿಂತೆಯಿಂದ ಕೊರಗಿ ಸಾಯುವ ಮುನ್ನವೇ ಅವರು ಆ ಐಶ್ವರ್ಯಭೋಗಕ್ಕೆ ಜಲಾಂಜಲಿ ಕೊಟ್ಟರು. ವರ್ತಮಾನಕ್ಕಿಂತ ಭವಿಷ್ಯವನ್ನೇ ಅವರು ಹೆಚ್ಚು ಮೆಚ್ಚುತ್ತಾರೆಂದು ಮೊದಲೇ ಹೇಳಿದೆ.

ಆದರೆ ತರುಣಿ ವಿನೋದಿನಿಯು ಒಮ್ಮೆಲೆ ಪ್ರಜ್ಞಳಾಗುವಳೆಂದು ನಿರೀಕ್ಷಿಸುವಂತಿಲ್ಲ. ಪಾಪ, ಅವಳ ದುರ್ಮೂಲ್ಯವರ್ತಮಾನವು,—ಅವಳ ನವವಿಕಸಿತ ಯೌವನವು,— ಪ್ರೇಮವನ್ನು ಅರಿಯದೆಯೇ ಹಾಗೆಯೇ ವ್ಯರ್ಥ ಸಾಗಿದೆ. ಇದನ್ನು ಕುರಿತು ಅವಳು ಕೊರಗುತ್ತಾಳೆ. ಇಹಲೋಕದ ಚಿತ್ತ–ಕ್ಷುಧಾ–ದಾಹದಲ್ಲಿ ಅವಳು ಪರಲೋಕದ ಪಿಂಡದ ಕ್ಷುಧೆಯನ್ನು ಸಂಪೂರ್ಣವಾಗಿ ಮರೆತೇ ಬಿಟ್ಟಿದ್ದಳು. ಮನುವಿನ ಪುತ್ರವಿಧಾನ ಹಾಗೂ ಬೈಜನಾಥರ ಆಧ್ಯಾತ್ಮಿಕ ವ್ಯಥೆಯಿಂದ ಅವಳ ಬುಭುಕ್ಷಿತ ಹೃದಯಕ್ಕೆ ತಿಲಮಾತ್ರವೂ ತೃಪ್ತಿಯೆನಿಸಲಿಲ್ಲ.

ಬೇಕಾದವರು ಬಲ್ಲಂತೆ ಆಡಲಿ, ಆದರೆ ಈ ವಯಸ್ಸಿನಲ್ಲಿ ಪ್ರೇಮಮಾಡುವುದು, ಪ್ರೇಮ ಪಡೆಯುವುದು ಸ್ತ್ರೀಗೆ ಅವಶ್ಯಕ. ಇದರ ಎದುರು ಜಗತ್ತಿನ ಯಾವುದೇ ಸುಖ-ಸಂಪತ್ತು ವ್ಯರ್ಥ.

ವಿನೋದಿನಿಯ ಭಾಗ್ಯದಲ್ಲಿ ನವೀನ ಪ್ರೇಮದ ವೃಷ್ಟಿಗೆ ಬದಲಾಗಿ ಗಂಡನ, ಅತ್ತೆ-ಮಾವಂದಿರ, ಮನೆಯ ಅನ್ಯಾನ್ಯ ಗುರುಜನರ ಹಾಗೂ ಗುರುತಿನ ಜನರ, ಸಮ್ಮಿಲಿತ ಶಿಲಾವೃಷ್ಟಿಯು ಆಕಾಶದಿಂದ ಗರ್ಜಿಸುತ್ತ ಬೀಳತೊಡಗಿತು. ಎಲ್ಲರೂ ಅವಳಮೇಲೆ ತಪ್ಪು ಹೊರಿಸತೊಡಗಿದರು. ಕೋಮಲ ಪುಷ್ಪದ ಗಿಡವನ್ನು ಗಾಳಿ-ಬೆಳಕಿನಿಂದ ಬೇರೆ ಮಾಡಿ ಕತ್ತಲೆಕೋಣೆಯಲ್ಲಿಟ್ಟರೆ ಆಗುವ ಅವಸ್ಥೆ, ಈಗ ಪಾಪ, ವಿನೋದಿನಿಯ ಯೌವನಕ್ಕಾಯಿತು.

ಹಗಲಿರುಳೂ ಇದೇ ಪ್ರಕಾರವಾಗಿ ಗುಸು ಗುಸು ಮಾತಾಡುವುದನ್ನು ಕೇಳಿ ಕೇಳಿ ವಿನೋದಿನಿ ಬೇಸರುತ್ತಿದ್ದಳು. ಆಗ ಪಕ್ಕದ ಮನೆಯ ಕುಸುಮೆಯ ಜೊತೆಗೆ ಹಾಳೆ ಆಡಲು ಹೋಗುತ್ತಿದ್ದಳು. ಅವಳಿಗೆ ಆಟದಲ್ಲಿ ಹೆಚ್ಚು ಆಸಕ್ತಿ. ಅಲ್ಲಿ 'ಪುನ್ನಾಮ' ನರಕದ ಭೀಷಣ ಛಾಯೆ ಸರ್ವದಾ ಮುಸುಕಿರುತ್ತಿರಲಿಲ್ಲ. ಆದ್ದರಿಂದ ನಗುತ್ತ ಕೆಲೆಯುತ್ತ, ಹರಟೆ ಹೊಡೆಯುತ್ತ ಆಡುತ್ತಿದ್ದಳು.

ಎಂದಾದರೂ ಆಟಕ್ಕೆ ಜನರು ಕಡಿಮೆಯಾದಾಗ ಕುಸುಮೆ ತನ್ನ ತರುಣ ಮೈದುನ ನಗೇಂದ್ರನನ್ನು ಕರೆದುಕೊಂಡು ಬರುತ್ತಿದ್ದಳು. ನಗೇಂದ್ರನೂ ಅಷ್ಟೆ, ವಿನೋದಿನಿಯ ಕೊರಗನ್ನು ನಕ್ಕು ದೂರ ಮಾಡುತ್ತಿದ್ದ. ಈ ಪ್ರಪಂಚದಲ್ಲಿ ನಾವೊಂದು ಬಗೆದರೆ ದೈವವು ಬೇರೊಂದನ್ನು ಬಗೆಯುತ್ತದೆ. ಈ ಆಟವು ಮುಂದೆ ಎಂದಾದರೂ ಸಂಕಟವನ್ನು ತಂದೊಡ್ಡುವುದೆಂದು ಎಳೆಯ ವಯಸ್ಸಿನಲ್ಲಿ ಒಮ್ಮೆಲೇ ನಂಬುಗೆ ಹುಟ್ಟುವುದಿಲ್ಲ.

ಈ ವಿಷಯದಲ್ಲಿ ನಗೇಂದ್ರನ ಸಂಕೋಚವೂ ಮೆಲ್ಲಮೆಲ್ಲಗೆ ದೂರವಾಯಿತು. ಈಗ ಅವನು ಹಾಳೆ ಆಡಲು ಕರೆಯದೆಯೇ ಬರತೊಡಗಿದ.

ಹೀಗೆ ವಿನೋದಿನಿ, ನಗೇಂದ್ರರು ಒಂದೆಡೆ ಬೆರೆಯತೊಡಗಿದರು.

ನಗೇಂದ್ರನು ಹಾಳೆ ಆಟಕ್ಕೆ ಕುಳಿತಾಗ ಹಾಳೆಯನ್ನು ಹೆಚ್ಚು ನೋಡದೆ ಆ ಸಜೀವ ಮೂರ್ತಿಯನ್ನೇ ಮನಸ್ಸುಗೊಟ್ಟು ನೆಟ್ಟನೋಟದಿಂದ ನೋಡುತ್ತಿದ್ದ. ಆದ್ದರಿಂದ ಅವನು ಆಟವನ್ನು ಸೋಲುವುದೇ ಹೆಚ್ಚು. ಈ ಸೋಲಿನ ಕಾರಣವು ಕುಸುಮೆಗೂ ವಿನೋದಿನಿಗೂ ತಿಳಿಯದಿರಲಿಲ್ಲ. ಕರ್ಮಫಲವನ್ನು

ತಿಳಿಯುವುದು ಎಳೆಯ ವಯಸ್ಸಿನ ಶಕ್ತಿಯ ಹೊರಗಿನ ಮಾತೆಂದು ಮೊದಲೇ ಹೇಳಿದ್ದೇನೆ. ಕುಸುಮೆ ಮನಸ್ಸಿನಲ್ಲೇ 'ಇದೊಂದು ಮೋಜು ನಡೆದಿದೆ. ಇದು ಕ್ರಮಶಃ ಸಂಪೂರ್ಣವಾಗಿ, ಹದಿನಾರಾಣೆ, ಶೀಘ್ರದಲ್ಲೇ ಫಲಿಸಲಿ' ಎಂದು ಯೋಚನೆ ಮಾಡುತ್ತಿದ್ದಳು. ಪ್ರೇಮದ ನವಾಂಕುರಕ್ಕೆ ಮರೆಯಲ್ಲಿ-ದ್ದುಕೊಂಡು ನೀರೆರೆಯುವುದು ತರುಣಿಯರ ಕೌತುಕದ ಕೆಲಸ.

ವಿನೋದಿನಿಗೂ ಇದು ಅಸಹ್ಯವೆನಿಸಲಿಲ್ಲ. ಹೃದಯವನ್ನು ಗೆಲ್ಲುವುದಕ್ಕಾಗಿ ಹದನವಾದ ಅಸ್ತ್ರವನ್ನು ಪರ ಪುರುಷನ ಮೇಲೆ ತಿಕ್ಕಿ ಹರಿತಗೊಳಿಸುವುದು ಅನ್ಯಾಯವಾಗಬಹುದು, ಆದರೆ ಅಸ್ವಾಭಾವಿಕವೇನೂ ಅಲ್ಲ.

ಹೀಗೆ, ಹಾಳೆಯ ಆಟದ ಸೋಲು-ಗೆಲುವಿನ ಚಕ್ರದಲ್ಲಿ ಎಂದೋ, ಇಬ್ಬರು ಆಟಗಾರರ ಹೃದಯಗಳು ಒಂದಾದವು ಅಂತರ್ಯಾಮಿಯ ಹೊರತು ಮತ್ತೊಬ್ಬ ಆಟಗಾರ್ತಿಯೂ ಇದನ್ನು ನೋಡಿದಳು, ಆನಂದಪಟ್ಟಳು.

ಒಂದು ದಿವಸ ಮಧ್ಯಾಹ್ನದಲ್ಲಿ ವಿನೋದೆ, ಕುಸುಮೆ, ನಗೇಂದ್ರ, ಈ ಮೂವರೂ ಹಾಳೆ ಆಟವನ್ನು ಆಡುತ್ತಿದ್ದರು. ಆಟವಾಡುತ್ತಿರುವಾಗಲೇ ಕುಸುಮೆಯ ರುಗ್ಣ ಮಗ ಅಳತೊಡಗಿದ. ಅದಕ್ಕಾಗಿ ಅವಳು ಎದ್ದು ಹೋದಳು. ನಗೇಂದ್ರನು ವಿನೋದಿನಿಯು ಕೂಡ ಮಾತಿಗೆ ಮೊದಲುಮಾಡಿದ. ಏನು ನಡೆದಿತ್ತೆಂಬುದು ಇಬ್ಬರಿಗೂ ಗೊತ್ತಾಗಲಿಲ್ಲ. ಅವರ ಶರೀರದ ರಕ್ತ ಸ್ರೋತವು ಅವರಿಬ್ಬರ ಹೃತ್ಪಿಂಡವನ್ನೂ ಉದ್ವೇಲಿತ ಮಾಡಿ ಶರೀರದ ನರ ನರಗಳಲ್ಲಿ ತೆರೆಹೊಡೆಯಲಾರಂಭಿಸಿತು.

ಒಮ್ಮೆಲೇ ನಗೇಂದ್ರನ ಉನ್ಮತ್ತ ಯೌವನವು ಕಟ್ಟನ್ನೆಲ್ಲ ಒಡೆಯಿತು. ಒಮ್ಮೆಲೇ ಆತನು ವಿನೋದಿನಿಯ ಎರಡೂ ಕೈಗಳನ್ನು ಬಲವಾಗಿ ಹಿಡಿದು ಗಟ್ಟಿಯಾಗಿ ತನ್ನ ಕಡೆಗೆ ಎಳೆದುಕೊಂಡು ಅವಳನ್ನು ಚುಂಬಿಸಿದ. ನಗೇಂದ್ರನ ಈ ವ್ಯವಹಾರದಿಂದ ವಿನೋದೆ ಅಪಮಾನಿತಳಾದಳು; ಸಿಟ್ಟು, ಕ್ಷೋಭ, ನಾಚಿಕೆಗಳಿಂದ ಅಧೀರಳಾದಳು. ತನ್ನ ಕೈಯನ್ನು ಬಿಡಿಸಿಕೊಳ್ಳಬು ಕೊಸರಿಕೊಳ್ಳ ತೊಡಗಿದಳು. ಇಷ್ಟರಲ್ಲಿ, ಮೂರನೆಯವರು ಯಾರೋ ಒಬ್ಬರು ಅಲ್ಲಿಗೆ ಬರುತ್ತಿರುವುದನ್ನು ಇಬ್ಬರೂ ನೋಡಿದರು. ನಗೇಂದ್ರನು ನೆಲ ನೋಡುತ್ತ ಹೊರಬೀಳಲು ದಾರಿ ಹುಡುಕಲಾರಂಭಿಸಿದ.

"ತಾಯಿ, ನಿಮ್ಮನ್ನು ಅತ್ತೆ ಕರೆಯುತ್ತಿದ್ದಾರೆ!"—ತೊತ್ತು ಬಂದು ಗಂಭೀರ ಸ್ವರದಲ್ಲಿ ವಿನೋದಿನಿಗೆ ಹೇಳಿದಳು.

ವಿನೋದಿನಿಯ ಕಣ್ಣುಗಳಲ್ಲಿ ನೀರೂರಿತ್ತು. ಅವಳು ಕಣ್ಣುಗಳಿಂದ ಕಿಡಿ ಕಾರುತ್ತ ನಗೇಂದ್ರನನ್ನು ನೋಡುತ್ತ ನೋಡುತ್ತ ತೊತ್ತಿನ ಕೂಡ ಹೊರಟು ಹೋದಳು.

ತೊತ್ತು ತಾನು ಏನು ನೋಡಿದ್ದಳೋ ಅದರಲ್ಲಿ ಕೊಂಚ ಕಡಮೆ ಮಾಡಿ, ಹಾಗೂ ನೋಡದಿದ್ದುದನ್ನು ಚನ್ನಾಗಿ ಉಪ್ಪು ಕಾರ ಹಚ್ಚಿ ಬಣ್ಣಿಸಿ ವೈಜನಾಥರಿಗೆ ಹೇಳಿದಳು. ಅದರಿಂದ ಅಂತಃಪುರದ ತುಂಬ ದೊಡ್ಡ ಹಾಹಾಕಾರವೆದ್ದಿತು. ವಿನೋದಿನಿಯ ಅವಸ್ಥೆ ಏನಾಯಿತೆಂಬುದನ್ನು ಹೇಳುವುದಕ್ಕಿಂತ ಅದನ್ನು ಊಹಿಸಿಕೊಳ್ಳುವುದೇ ವಿಹಿತ. ತಾನು ನಿರಪರಾಧಿ ಎಂದು ಕೂಡ ಅವಳು ಹೇಳಲು ಪ್ರಯತ್ನಿಸಲಿಲ್ಲ; ಸುಮ್ಮನೆ ತಲೆಬಾಗಿಸಿಕೊಂಡು ಸಹನವಮಾಡಿಕೊಳ್ಳುತ್ತಿದ್ದಳು.

ವೈಜನಾಥರು ತಮ್ಮ ಭಾವೀ ಪಿಂಡದಾತನನ್ನು ಕುರಿತು ಅತ್ಯಂತ ಸಂಶಯಾನ್ವಿತರಾದರು. "ಕಲಂಕಿನಿ, ತೊಲುಗು ಇಲ್ಲಿಂದ! ನನಗೆ ನಿನ್ನ ಮೋರೆಯನ್ನೂ ತೋರಿಸಬೇಡ! ಮನೆಬಿಡು!" ಎಂದರು.

ವಿನೋದಿನಿ ತನ್ನ ಕೋಣೆಗೆ ಹೋಗಿ ಬಾಗಿಲು ಮುಚ್ಚಿಕೊಂಡು ಹಾಸುಗೆಯ ಮೇಲೆ ಬಿದ್ದುಕೊಂಡಳು; ಅವಳ ಅಶ್ರುಹೀನ ನೇತ್ರಗಳು ಮಧ್ಯಾಹ್ನದ ಮರುಭೂಮಿಯಂತೆ ಉರಿಯುತ್ತಿದ್ದವು. ಹೊತ್ತು ಮುಳುಗಿತು. ಕತ್ತಲೆಯ ಮೊತ್ತಗಳು ಸುತ್ತಿ ಬಂದು ಮುತ್ತಿದವು. ತೋಟಗಳಲ್ಲಿ ಕಾಗೆಗಳ ಕಾ, ಕಾ, ಧ್ವನಿ ಇಲ್ಲವಾಯಿತು. ನಕ್ಷತ್ರಗಳಿಂದ ಕೆತ್ತಿದ ಶಾಂತ ಆಗಸವನ್ನು ನೋಡಿದಾಗ ವಿನೋದಿನಿಗೆ ತನ್ನ ತಾಯಿ-ತಂದೆಗಳ ನೆನಪಾಯಿತು. ಅವಳ ಎರಡೂ ಕೆನ್ನೆಗಳ ಮೇಲೆ ಕಣ್ಣೀರು ಬಳ ಬಳ ಉದುರತೊಡಗಿತು.

ಅದೇ ರಾತ್ರಿ ವಿನೋದಿನಿ ತನ್ನ ಗಂಡನನ್ನೂ ಗಂಡನ ಮನೆಯನ್ನೂ ಕೊನೆಯ ವರೆಗೆ ಬಿಟ್ಟು ಎಲ್ಲಗೋ ಹೊರಟುಹೋದಳು! ಯಾರೂ ಅವಳನ್ನು ಹುಡುಕುವ ಹವ್ಯಾಸಕ್ಕೆ ಹೋಗಲಿಲ್ಲ.

ವಿನೋದಿನಿಗೆ, —'ಪ್ರಜನಾರ್ಥ ಮಹಾಭಾಗಾ'—ಸ್ತ್ರೀಜನ್ಮದ ಮಹಾಭಾಗ್ಯವು ಪ್ರಾಪ್ತವಾಗಿತ್ತು. ತನ್ನ ಗಂಡನ ಪಾರಲೌಕಿಕ ಸದ್ಗತಿಯು ಮಗುವಿನ ರೂಪದಿಂದ ತನ್ನ ಗರ್ಭದಲ್ಲಿ ಬಂದು ಆಶ್ರಯಿಸಿತ್ತು ಎಂಬುದು ಅವಳಿಗೆ ಗೊತ್ತೇ ಇರಲಿಲ್ಲ!

ಈ ಮಾತಿಗೆ ಹತ್ತು ವರುಷಗಳು ಸಂದವು.

ಈ ನಡುವೆ ಬೈಜನಾಥರ ಆರ್ಥಿಕ ಸ್ಥಿತಿ ತಕ್ಕಷ್ಟು ಸುಧಾರಿಸಿದೆ. ಈಗ ಅವರು ಹಳ್ಳಿಯನ್ನು ಬಿಟ್ಟು ಕಲಕತ್ತೆಗೆ ಬಂದಿದ್ದಾರೆ; ಗಗನ ಚುಂಬಿತ ಭವ್ಯ ಮನೆಯೊಂದನ್ನು ಕೊಂಡು ಅಲ್ಲಿಯೇ ಇರತೊಡಗಿದ್ದಾರೆ.

ಸಂಪತ್ತು ಹೆಚ್ಚಾಗುತ್ತಿದ್ದಂತೆ ಆ ಸಂಪತ್ತಿನ ಉತ್ತರಾಧಿಕಾರಿಗಾಗಿ ಅವರ ಮನಸ್ಸು ಅಷ್ಟೇ ವ್ಯಾಕುಲವಾಗುತ್ತಿತ್ತು.

ಅವರು ಒಂದರ ಮೇಲೊಂದರಂತೆ ಮತ್ತೆ ಎರಡು ಮದುವೆಯಾದರು. ಆದರೆ ಮಕ್ಕಳಾಗಲಿಲ್ಲ, ಕಲಹವು ಮಾತ್ರ ಬೆಳೆಯಿತು. ಅವರ ಮನೆಯು ದೈವಜ್ಞ ಪಂಡಿತರಿಂದ, ಸಂನ್ಯಾಸಿ ಅವಧೂತರಿಂದ, ತುಂಬಿತು. ಕಂಡ ಕಂಡ ವನಸ್ಪತಿಗಳನ್ನು ತಿನ್ನುವುದು, ಬೂದಿ ಮಂತ್ರಿಸಿಕೊಳ್ಳುವುದು, ತಾಯಿತ ಕಟ್ಟಿಕೊಳ್ಳುವುದು, ಪೇಟೆಂಟ್ ಔಷಧ ಸೇವನ ಮಾಡುವುದು ನಡೆದೇ ಇತ್ತು. ಕಾಲೀಗಟ್ಟದಲ್ಲಿ ಕೊಂದ ಆಡಿನ ಮರಿಗಳ ಎಲುಬಿನಿಂದ ಒಂದು ಸ್ತೂಪ ವನ್ನು ಕಟ್ಟಿದ್ದರೆ ಅದರ ಎದುರಿಗೆ ತೈಮೂರನ ಕಂಕಾಲ-ಜಯಸ್ತಂಭವೂ ನಾಚಿಕೊಳ್ಳುತ್ತಿತ್ತು. ಆದರೂ, ಈ ಎಲುಬು ಮಾಂಸಗಳಿಂದ ಬೈಜ ನಾಥರಿಗೆ ಒಂದು ಚಿಕ್ಕ ಮಗು ಹುಟ್ಟಿ, ವಿಶಾಲ ಪ್ರಾಸಾದದ ಒಂದು ಮೂಲೆ ಯನ್ನೂ ಅಲಂಕರಿಸಲಿಲ್ಲ. ಎಂದಾದರೊಂದು ದಿನ, ತಾನು ಕಣ್ಣು ಮುಚ್ಚಿದ ಮೇಲೆ, ಬೇರೆ ಹುಡುಗನೊಬ್ಬನು ಬಂದು ಈ ಸೊತ್ತಿಗೆ ಒಡೆಯನಾಗುವನು. ಮನಸ್ಸಿಗೆ ಬಂದಂತೆ ತಿನ್ನುಣ್ಣುವನು, ಮೋಜು ಮಾಡುವನು, ಎಂಬ ಮನೋ ವ್ಯಥೆಯಿಂದ ಅವರ ಊಟ-ಉಡಿಗೆ ಕೂಡ ತಪ್ಪಿದವು ; ಯಾವ ಮಾತಿನಲ್ಲೂ ಅವರಿಗೆ ರುಚಿ ಉಳಿಯಲಿಲ್ಲ.

ಬೈಜನಾಥರು ಮತ್ತೊಂದು ಮದುವೆಯಾದರು. ಕಾರಣವೆಂದರೆ ಈ ಪ್ರಪಂಚದಲ್ಲಿ ಆಶೆಗೆ ಕೊನೆಯೇ ಇಲ್ಲ; ಕನ್ಯಾಭಾರಗ್ರಸ್ತರ ಮನೆಯಲ್ಲಿ ಕನ್ಯೆಗೇನೂ ಕೊರತೆ ಇಲ್ಲ.

ಈ ಕನ್ಯೆಯ ಪುತ್ರಸ್ಥಾನದಲ್ಲಿ ಶುಭಯೋಗವಿದೆ. ಆದ್ದರಿಂದ ಬೈಜ-ನಾಥರು ಬೇಗನೇ ಮಗನ ಮೋರೆಯನ್ನು ಕಾಣುವರು, ಎಂದು ದೈವಜ್ಞರು ಜನ್ಮಕುಂಡಲಿ ನೋಡಿ ಹೇಳಿದರು. ಆ ಮಾತಿಗೆ ಆರು ವರುಷ ಸಂದವು. ಆದರೆ ಪುತ್ರಸ್ಥಾನದ ಶುಭಯೋಗವು ಒದಗಿ ಬರಲಿಲ್ಲ.

ಬೈಜನಾಥರ ಸೊಂಟ ನಿರಾಶೆಯಿಂದ ಬಾಗಿತು. ಕೊನೆಗೆ ಅವರು ಶಾಸ್ತ್ರಜ್ಞ ಪಂಡಿತರಿಗೆ ಹೇಳಿ ನೋಡಿಸಿದರು. ಬೃಹತ್ ಯಜ್ಞದ ಆಯೋಜನೆ

ನಡೆಯಿತು. ತಿಂಗಳುಗಟ್ಟಲೆ ಅನೇಕ ಮಂದಿ ಬ್ರಾಹ್ಮಣ ಮುತ್ತೈದೆಯರು ಸೇವೆ ಪಡೆಯತೊಡಗಿದರು.

ಇದೇ ಹೊತ್ತಿಗೆ ದೇಶದಲ್ಲೆಲ್ಲಾ ಬರಗಾಲ ಬಂದಿತು. ಇದರಿಂದ ಬಡವರು ಕಂಗಾಲರಾದರು. ಹೊಟ್ಟೆಗೆ ಹಿಟ್ಟಿಲ್ಲದೆ ಜನರು ಬಾಯಿ ಬಾಯಿ ಬಿಡುತ್ತಿದ್ದರು. ಆದರೆ ಬೈಜನಾಥರು ಮಾತ್ರ ತಮ್ಮ ಅಪಾರ ಸಂಪತ್ತಿನ ರಾಶಿಯ ಮೇಲೆ ಕುಳಿತುಕೊಂಡು "ನನ್ನ ಈ ಸಂಪತ್ತನ್ನು ತಿನ್ನುವವರು ಯಾರು?" ಎನ್ನುತ್ತಿದ್ದರು. ಇದೇ ಹೊತ್ತಿಗೆ ನಿರ್ಗತಿಕರು ಕ್ಷುಧಾರಾಕ್ಷಸನ ಬಾಧೆಯನ್ನು ತಾಳಲಾರದೆ ತಮ್ಮ ಬರಿಯೊಡಲನ್ನು ನೋಡಿಕೊಂಡು 'ಏನು ತಿನ್ನೋಣ?' ಎಂದು ಯೋಚನೆ ಮಾಡುತ್ತಿದ್ದರು.

ಇತ್ತ ಇದೇ ಹೊತ್ತಿಗೆ ಬೈಜನಾಥರ ನಾಲ್ಕನೆಯ ಹೆಂಡತಿ ನೂರು ಬ್ರಾಹ್ಮಣರ ಪಾದೋದಕವನ್ನು ಪಾನಮಾಡುತ್ತಿದ್ದಳು. ಇದು ನಾಲ್ಕು ತಿಂಗಳಿಂದ ನಡೆದಿತ್ತು. ಪ್ರತಿದಿನ ಪ್ರಾತಃಕಾಲ ನೂರು ಬ್ರಾಹ್ಮಣರಿಗೆ ಭೂರಿಭೋಜನ, ಸಂಜೆಗೆ ಅಪರ್ಯಾಪ್ತ ಫಲಾಹಾರ ಮಾಡಿಸುತ್ತಿದ್ದರು. ಹಾಲು-ಮೊಸರು-ತುಪ್ಪದಲ್ಲಿ ಮಿಂದ ಎಲೆಗಳಿಂದ ನಗರಸಭೆಯ ಕಸದ ಬಂಡಿಗಳು ತುಂಬಿದ್ದವು. ಅನ್ನದ ಗಂಧವನ್ನು ಗುರುತಿಸಿಕೊಂಡು ಬಾಗಿಲಿಗೆ ಅಕಾಲ ಪೀಡಿತ ಹಸಿದ ಜನರ ಹಿಂಡು ಬಂದಾಗ ಅವರನ್ನು ಹೊಡೆದಟ್ಟಲು ಒಬ್ಬ ದ್ವಾರಪಾಲಕನನ್ನು ನಿಯಮಿಸಿದ್ದರು.

ಒಂದು ಬೆಳಿಗ್ಗೆ ಬಿಳಿಕಲ್ಲುಗಳನ್ನು ಹಾಕಿದ ಅಂಗಳದಲ್ಲಿ ಕಟ್ಟೆಯ ಮೇಲೆ ಆಸನಹಾಕಿಕೊಂಡು ಒಬ್ಬ ಸ್ಥೂಲೋದರ ಸಂನ್ಯಾಸಿ ಎರಡು ಸೇರು ಮೋಹನಭೋಗವನ್ನೂ ಒಂದುವರೆ ಸೇರು ಹಾಲನ್ನೂ ಹೊಡೆಯುತ್ತಲಿದ್ದ. ಅವರ ಈ ಭೋಗವನ್ನು ಬೈಜನಾಥರು ಪಟ್ಟವಸ್ತ್ರಗಳನ್ನುಟ್ಟು ಎರಡೂ ಕೈ ಜೋಡಿಸಿಕೊಂಡು ಅತ್ಯಂತ ವಿನಯಭಾವದಿಂದ ನೆಲದ ಮೇಲೆ ಕುಳಿತುಕೊಂಡು ಭಕ್ತಿಪೂರ್ವಕವಾಗಿ ನೋಡುತ್ತಿದ್ದರು. ಅದೇ ಹೊತ್ತಿಗೆ ದ್ವಾರಪಾಲಕನ ಕಣ್ಣುತಪ್ಪಿಸಿ ಕ್ಷೀಣ-ದುರ್ಬಲ ದೇಹದ ತನ್ನ ಮಗುವನ್ನು ಹರಕು ಬಟ್ಟೆಯಲ್ಲಿ ಸುತ್ತಿಕೊಂಡು ರೋಗಿಯಂತಹ ಒಬ್ಬ ಹೆಂಗುಸು ಅಲ್ಲಿಗೆ ಬಂದು, "ಸ್ವಾಮಿ, ಏನಾದರೂ ಸ್ವಲ್ಪ ತಿನ್ನಲು ಕೊಡಿ" ಎಂದು ಅತ್ಯಂತ ಕ್ಷೀಣ ಸ್ವರದಿಂದ ಕೇಳಿದಳು.

"ಗುರುದಯಾಲ್! ಗುರುದಯಾಲ್!" –ಬೈಜನಾಥರು ಬೆಪ್ಪಾಗಿ

ಚೀರಿಕೊಂಡರು. ಬಡಪಾಯಿ ಅದನ್ನೆಲ್ಲ ನೋಡಿ ನಡುಗಿದಳು. 'ಸ್ವಾಮಿ, ಈ ಮಗುವಿಗೆ ಎರಡು ರೊಟ್ಟಿ ಕೊಡಿ. ಹಸಿವೆಯಿಂದ ಕಂಗಾಲಾಗಿ ಚಡಪಡಿಸುತ್ತಿದೆ. ನನಗೇನೂ ಬೇಡ, ಇವನಿಗೆ ಕೊಡಿ.'—ಮತ್ತೆ ಅವಳು ಬಹಳ ಕ್ಷೀಣ ಸ್ವರದಿಂದ ಕೇಳಿದಳು.

ಗುರುದಯಾಲನು ಬಂದು ತಾಯಿಮಗನನ್ನು ದೂಡಿ ಹೊರಗೆ ಹಾಕಿದ. ಹಸಿವೆಯನ್ನು ತಾಳಲಾರದೆ ಚಡಪಡಿಸುತ್ತಿರುವ ಹುಡುಗ, ಬೈಜನಾಥರ ಏಕಮಾತ್ರ ಪುತ್ರನಾಗಿದ್ದ! ಒಂದು ನೂರು ಪರಿಪುಷ್ಟ ಬ್ರಾಹ್ಮಣರು ಮತ್ತು ಮುವ್ವರು ಬಲಿಷ್ಠ ಸಂನ್ಯಾಸಿಗಳು ಬೈಜನಾಥರನ್ನು ಪುತ್ರಪ್ರಾಪ್ತಿಯ ಆಶೆಯಲ್ಲಿ ನೂಕಿ ಆನಂದದಿಂದ ಆ ಮಗುವಿನ ಅನ್ನವನೇ ಕಸಿದುಕೊಂಡು ತಿನ್ನ ತೊಡಗಿದ್ದರು. ಆದರೆ ಆ ಮಗುವಿಗೆ ಮಾತ್ರ ಅಲ್ಲಿ ಎಲ್ಲಿಯೂ ಸ್ಥಾನವಿರಲಿಲ್ಲ!!



# ಕೆಲವು ಪುಸ್ತಕಗಳು

## ಕಥಾಸಂಗ್ರಹಗಳು :

| | | |
|---|---|---|
| ಸಂಸಾರ ಚಿತ್ರ | ಆನಂದಕಂದ | ೨—೪—೦ |
| ಸರಟಿಗ | ಕುಲಕರ್ಣಿ ಶ್ರೀನಿವಾಸ | ೦-೧೦—೦ |
| ಗ್ರೀಕ್ ನಾಟಕ ಕತೆಗಳು | ಡಿ. ವಿ. ಶೇಷಗಿರಿರಾವ್ | ೨—೫—೦ |

## ಕಾದಂಬರಿಗಳು :

| | | |
|---|---|---|
| ಅಕ್ಕ-ತಂಗಿ | ನಾರಾಯಣ ಸಂಗಮ | ೨—೮—೦ |
| ಚಂದ್ರನಾಥ | ಶರಚ್ಚಂದ್ರ | ೧—೪—೦ |
| ನವವಿಧಾನ | ,, | ೦-೧೨—೦ |
| ತಿರಿಗಿ ಮನೆಗೆ | ಚಾರು ವಂದ್ಯೋಪಾಧ್ಯಾಯ. | ೧-೧೦—೦ |
| ಬಾಳಿನ ಗಿಡ | ದಿ. ಹರಿವಾಸರಾಯರು | ೨—೮—೦ |

— ಸಾಹಿತ್ಯ ಭಂಡಾರ, ಹುಬ್ಬಳ್ಳಿ —